CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಡಿಸೆಂಬರ್ ೧, ೨೦೦೫ (ಮಾರ್ಗಶಿರ ೧೦, ಶಕವರ್ಷ ೧೯೨೭) | ಸಂಚಿಕೆ ೪೭ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಕಛೇರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಗ್ರಾಮೀಣ ವಲಯ, ಬಿಜಾಪುರ ಕಾರ್ಯಾಲಯ,**

**ನಮೂನೆ-1**

**(9ನೇ ನಿಯಮ ನೋಡಿ)**

**ಅಧಿಸೂಚನೆ ದಿನಾಂಕ: 12ನೇ ಏಪ್ರಿಲ್, 2005**

ಸಾರ್ವಜನಿಕ ಶಿಕ್ಷಣ ಇಲಾಖೆಯ ಕಛೇರಿಯಲ್ಲಿ ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಶಿರನಾಳದಲ್ಲಿ ಸಹ ಶಿಕ್ಷಕ ಆಗಿ ಕೆಲಸ ಮಾಡುತ್ತಿರುವ **ಶ್ರೀ ರಾಯಪ್ಪ ನಾಗಪ್ಪ ವಡ್ಡರ,** ರವರಿಗೆ ಅವರ ಹೆಸರನ್ನು **ರಾಯಪ್ಪ ನಾಗಪ್ಪ ಕಂದಗಲ್ಲ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಉಪ ನಿರ್ದೇಶಕರು,

ಪಿ.ಡಿ. 119 ಸಾರ್ವಜನಿಕ ಶಿಕ್ಷಣ ಇಲಾಖೆ, ಬಿಜಾಪುರ.

**WATER RESOURCES DEPARTMENT**

**OFFICE OF THE EXECUTIVE-ENGINEER, WRD, KPC DIVISION, NO.2, BHALKI**

**CORRIGENDUM TO SHORT TERM TENDER NOTIFICATION**

**No. EE/ KPC-2/TS-3/ Tender/ Km-115/ RBC/ 2005-06/ 1488, Dated: 16th November, 2005**

**Ref :** 1. This office letter No. EE/ KPC-2/ TS-3/ Tender/ Km-115/ RBC/ 2005-06/ 1398 Dated: 29.10.2005.

2. This office letter No. EE/ KPC-2/ TS-3/ Tender/ Km-115/ RBC/ 2005-06/1459 Dated: 09.11.2005.

In the above short term tender notification the following changes have been made.

**As already Notified:**

**1. Work Sl.No.2:** Construction of RCC Through Aqueduct at Km 114.67 of Right Bank Canal of Karanja project.

**2. Work Sl.No.1:**

a) As approx. amount put to tender Rs.29.75 Lakhs. (b) E.M.D. Rs.30,000=00.

**3. Work Sl.No.2:**

a) Approx. amount put to tender Rs.36.79 Lakhs. (b) E.M.D. Rs. 37,000=00.

**As per Modification:**

**1. Work Sl.No.2:** Construction of RCC Through Aqueduct at Km 114.67 of Right Bank Canal of Karanja project- Balance Work.

**2. Work Sl.No.1:**

a) As approx. amount put to tender Rs.30.17 Lakhs. (b) E.M.D. Rs.30,500=00.

**3. Work Sl.No.2:**

a) Approx. amount put to tender Rs.36.16 Lakhs. (b) E.M.D. Rs. 36,500=00.

All other Conditions remain unchanged. Further details if required can be obtained from this office during working hour.

Executive-Engineer, WRD,

PR-640 KPC Division, No.2. Bhalki.

**ಕಮಾಂಡೆಂಟ್ ರವರ ಕಛೇರಿ, 1ನೇ ಪಡೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್,**
**ನಂ.60, ರಿಚ್‌ಮಂಡ್ ರಸ್ತೆ, ಬೆಂಗಳೂರು-560 025**
**ಪ್ರಕಟಣೆ**
**ಸಂಖ್ಯೆ: ವಾ.ಸಾ.ವಿ.(1): 26:2005-06, ದಿನಾಂಕ: 23ನೇ ನವೆಂಬರ್, 2005**

**ವಿಷಯ :** ಅನುಪಯುಕ್ತ ವಾಹನವನ್ನು ಸಾರ್ವಜನಿಕ ಟೆಂಡರ್ ಹಾಗೂ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ :** ಮಾನ್ಯ ಡಿ.ಜಿ. ಮತ್ತು ಐ.ಜಿ.ಪಿ. ಕರ್ನಾಟಕ ರಾಜ್ಯರವರ ಆದೇಶ ಸಂಖ್ಯೆ: ವಾ.ಸಾ.(1): 37: 2000-01 (ವಾಲ್ಯೂಂ 3) ದಿನಾಂಕ: 02.09.2005.

ಮೇಲಿನ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ, 1ನೇ ಪಡೆ, ಕೆ.ಎಸ್.ಆರ್.ಪಿ.ಗೆ ಸೇರಿದ ಈ ಕೆಳಕಂಡ ಅನುಪಯುಕ್ತ ವಾಹನವನ್ನು ಟೆಂಡರ್ ಹಾಗೂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ: **22.01.2006ರಂದು ಬೆಳಿಗ್ಗೆ 11.00 ಗಂಟೆಗೆ** 1ನೇ ಪಡೆ, ಕೆ.ಎಸ್.ಆರ್.ಪಿ. ವಾಹನ ವಿಭಾಗದ ಆವರಣದಲ್ಲಿ ನಡೆಸಲಾಗುವುದು. ಇ.ಎಂ.ಡಿ. ಹಣ ರೂ. 1,000-00 (ಒಂದು ಸಾವಿರ ರೂಪಾಯಿಗಳು ಮಾತ್ರ).

| ಕ್ರಮ ಸಂಖ್ಯೆ | ವಾಹನ ಸಂಖ್ಯೆ | ಮಾದರಿ | ತಯಾರಿಕ ವರ್ಷ |
|---|---|---|---|
| 1. | ಎಂ.ಇ.ಎನ್.4250 | ಅಂಬಾಸಿಡರ್ ಕಾರು | 1977 |

ಕಮಾಂಡೆಂಟ್,

ಪಿ.ಆರ್. 641 1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು.

**ಅರಣ್ಯ ಇಲಾಖೆ**
**ಉಪಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**
**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**
**ಸಂಖ್ಯೆ: ಎ2.ಕಾಮಗಾರಿ.ಸಿಆರ್.1/ 2005-06, ದಿನಾಂಕ:18ನೇ ನವೆಂಬರ್, 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕರ್ನಾಟಕ ರಾಜ್ಯಪಾಲರ ಪರವಾಗಿ ಈ ಕೆಳಗೆ ನಮೂದಿಸಿರುವ ಅನುಸೂಚಿಯಲ್ಲಿನ ಕಾಮಗಾರಿಗಳಿಗೆ, ಚಾಲ್ತಿ ವರ್ಷದ ಅರಣ್ಯ ಇಲಾಖೆ ಅಥವಾ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಮೊಹರಾದ ಲಕೋಟೆಗಳಲ್ಲಿ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರ್‌ದಾರರು ಅರಣ್ಯ ಇಲಾಖೆಯ ಟೆಂಡರ್ ನಮೂನೆಯನ್ನು ಈ ಕೆಳ ಸಹಿದಾರರ ಕಛೇರಿಯಿಂದ ನಿಗದಿಪಡಿಸಿದ ಬೆಲೆಯನ್ನು ಕೊಟ್ಟು ಪಡೆಯುವುದು. **ದಿನಾಂಕ: 28.12.2005 ರಂದು ಸಂಜೆ 4.00 ಗಂಟೆಯವರೆಗೆ** ಮೊಹರಾದ ಟೆಂಡರುಗಳನ್ನು ಕಛೇರಿಯಲ್ಲಿಟ್ಟ ಟೆಂಡರ್ ಡಬ್ಬಿಯೊಳಗೆ ಹಾಕುವುದು. ಸ್ವೀಕರಿಸಲಾದ ಟೆಂಡರ್‌ಗಳನ್ನು ಅದೇ ದಿನ ಸಾಯಂಕಾಲ 4.30 ಗಂಟೆಗೆ ತೆರೆಯಲಾಗುವುದು. ಸಾರ್ವಜನಿಕ ರಜೆಯಾದರೆ ಮಾರನೆಯ ಕರ್ತವ್ಯದ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ. ಮೊತ್ತಕ್ಕೆ ಡಿ.ಡಿ.ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗವೃತ್ತ, ಶಿವಮೊಗ್ಗ ಇವರ ಹೆಸರಿಗೆ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ತೆಗೆದುಕೊಂಡು ಟೆಂಡರು ಜೊತೆ ಲಗತ್ತಿಸುವುದು.

| ಕ್ರ.ಸಂ. | ಕೆಲಸದ ವಿವರ | ಅಂದಾಜು ವೆಚ್ಚ | ಇ.ಎಂ.ಡಿ. ಮೊತ್ತ |
|---|---|---|---|
| 1. | ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಕಛೇರಿಯ ಕಾಂಪೌಂಡ್ ಗೋಡೆ ನಿರ್ಮಾಣ. | 1,00,000.00 | 2,500.00 |

**ಷರತ್ತುಗಳು**

1) ಟೆಂಡರ್ ಫಾರಂಗಳನ್ನು **ದಿನಾಂಕ: 26.12.2005ರ ಬೆಳಿಗ್ಗೆ 11.00 ಗಂಟೆಯಿಂದ 27.12.2005ರ ಸಂಜೆ 5.00 ರವರೆಗೆ** ಕಛೇರಿಯ ವೇಳೆಯಲ್ಲಿ ಅನುಸೂಚಿಯಲ್ಲಿ ತಿಳಿಸಿರುವ ಕಾಮಗಾರಿಗಳಿಗೆ ಟೆಂಡರ್ ಫಾರಂ ಶುಲ್ಕ ಒಂದು ಫಾರಂಗೆ ರೂ.200.00 (ರೂ.ಎರಡು ನೂರು) ಮತ್ತು ಇತರೆ ತೆರಿಗೆಗಳನ್ನು ಪಾವತಿ ಮಾಡಿ ಕಛೇರಿಯಲ್ಲಿ ಟೆಂಡರ್ ಫಾರಂಗಳನ್ನು ಪಡೆಯಬಹುದಾಗಿದೆ.
2) ಇಲಾಖೆಯಿಂದ ಯಾವುದೇ ವಸ್ತುಗಳನ್ನು ಸರಬರಾಜು ಮಾಡಲಾಗುವುದಿಲ್ಲ. ಕಾಮಗಾರಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟ್ ಇತ್ಯಾದಿ ವಸ್ತುಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
3) ಅರ್ಜಿದಾರರು ತಮ್ಮ ಗುತ್ತಿಗೆ ನೊಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
4) ಈ ಟೆಂಡರನ್ನು ಕರೆಯಲ್ಪಡುವ ಅಧಿಕಾರಿಗಳಿಗೆ ಟೆಂಡರನ್ನು ಮುಂದೂಡುವ ಹಾಗೂ ರದ್ದುಪಡಿಸುವ ಅಧಿಕಾರವಿರುತ್ತದೆ. ಹಾಗೂ ಟೆಂಡರ್‌ನ ವಿಷಯದಲ್ಲಿ ಅಂತಿಮ ನಿರ್ಧಾರವನ್ನು ಸಹ ಇವರೇ ಕೈಗೊಳ್ಳುವ ಅಧಿಕಾರವನ್ನು ಹೊಂದಿರುತ್ತಾರೆ.
5) ಇನ್ನು ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 642 ಅರಣ್ಯ ಸಂಚಾರಿ ದಳ, ಶಿವಮೊಗ್ಗವೃತ್ತ, ಶಿವಮೊಗ್ಗ.

## ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು

## ಬಹಿರಂಗ ಸಾರ್ವಜನಿಕ ಹರಾಜು ಪ್ರಕಟಣೆ-ತಿದ್ದೋಲೆ

**ಸಂಖ್ಯೆ: ಲೋಕ್/ ಆರ್.ಕೆ.-1/ ಸ್ಟೋರ್ಸ್-27/ 2004-05/ 2005-06, ದಿನಾಂಕ:16ನೇ ನವೆಂಬರ್, 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 27.10.2005ರಂದು ನಡೆಸಬೇಕಾಗಿದ್ದ ಬಹಿರಂಗ ಸಾರ್ವಜನಿಕ ಹರಾಜನ್ನು ಕಾರಣಾಂತರಗಳಿಂದ ರದ್ದುಪಡಿಸಲಾಗಿದ್ದು, **ದಿನಾಂಕ: 12.12.2005ಕ್ಕೆ** ನಿಗದಿಪಡಿಸಲಾಗಿದೆ. ಉಳಿದಂತೆ ದಿನಾಂಕ: 19.09.2005ರ ಪ್ರಕಟಣೆಯಲ್ಲಿದ್ದಂತೆ ಮುಂದುವರೆಯುತ್ತದೆ.

ನಿಬಂಧಕರು,
ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

ಪಿ.ಆರ್. 643

## ಜಿಲ್ಲಾ ಪೊಲೀಸ್ ಕಛೇರಿ, ಹಾಸನ ಜಿಲ್ಲೆ, ಹಾಸನ

## ಅಧಿಸೂಚನೆ

**ಸಂಖ್ಯೆ:ಪಿಎಂಟಿ:110/ 2002-03, ದಿನಾಂಕ:22ನೇ ನವೆಂಬರ್, 2005**

**ವಿಷಯ :** ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಅನುಪಯುಕ್ತ ಪೊಲೀಸ್ ವಾಹನಗಳನ್ನು ಮರು ಟೆಂಡರ್ ಮೂಲಕ ಸಾರ್ವಜನಿಕ ಮರು ಹರಾಜು ಮಾಡಿ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ :** 1. ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ಹಾಸನ ಜಿಲ್ಲೆ, ಹಾಸನ ರವರ ನಡಾವಳಿ ಆದೇಶ ದಿನಾಂಕ: 30.08.2005 ಪ್ರಧಾನ ಕಛೇರಿ, ಪತ್ರ ಸಂಖ್ಯೆ: ವಾ.ಸಾ. (1) 89/ 2002-2003, ದಿನಾಂಕ: 19.09.2005.

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತಿಳಿಯಪಡಿಸುವುದೇನೆಂದರೆ, ದಿನಾಂಕ: 30.12.2005 ರಂದು ಬೆಳಿಗ್ಗೆ 11.00 ಗಂಟೆಗೆ ಸರಿಯಾಗಿ ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ ಹೊಸಲೈನ್ ರಸ್ತೆ ಹಾಸನದಲ್ಲಿ, ಹಾಸನ ಜಿಲ್ಲಾ ಪೊಲೀಸ್ ಇಲಾಖೆಯ ಕೆಳಕಂಡ ಅನುಪಯುಕ್ತ ವಾಹನಗಳ ಟೆಂಡರ್ ಕಂ ಬಹಿರಂಗ ಹರಾಜು ಮೂಲಕ ವಿಲೇವಾರಿಗೊಳಿಸಲಾಗುವುದು. ಸದರಿ ಅನುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆಯ ಕೇಂದ್ರಸ್ಥಾನ ಹೊಸಲೈನ್‌ರಸ್ತೆಯಲ್ಲಿ ಹಾಸನದ ಕಛೇರಿಯ ವೇಳೆಯಲ್ಲಿ ನೋಡಲು ಅವಕಾಶವಿರುತ್ತದೆ. ಸದರಿ ಅನುಪಯುಕ್ತ ವಾಹನಗಳ ವಿವರಗಳನ್ನು ಈ ಕೆಳಗೆ ನಮೂದಿಸಲಾಗಿದೆ.

| ಕ್ರ.ಸಂ. | ವಾಹನ ಮಾದರಿ ಮತ್ತು ಸಂಖ್ಯೆ | ನಮೂನೆ |
|---|---|---|
| 1. | ಎಂವೈಹೆಚ್ 1241 ಜೀಪು. | (ಫೆ) 1969 |
| 2. | ಎಂವೈಹೆಚ್ 8177 ಜೀಪು. | (ಫೆ) 1976. |

**ಹರಾಜಿನ ಷರತ್ತುಗಳು ಮತ್ತು ನಿಬಂಧನೆಗಳು**

1) ಸದರಿ ಅನುಪಯುಕ್ತ ವಾಹನಗಳನ್ನು ಜಿಲ್ಲಾ ಸಶಸ್ತ್ರ ಮೀಸಲು ಪಡೆ ಹೊಸಲೈನ್ ರಸ್ತೆ ಹಾಸನದಲ್ಲಿ ಬಹಿರಂಗ ಹರಾಜು ಮಾಡಲಾಗುವುದು. ಅವುಗಳು ಹಾಲಿ ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು.

2) ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಪ್ರತಿಯೊಬ್ಬರು ಪ್ರತಿ ವಾಹನ ಒಂದಕ್ಕೆ ರೂ.3,000/- ಠೇವಣಿಯನ್ನು ಹರಾಜಿಗೆ ಮುನ್ನ ನಗದಾಗಿ ಪಾವತಿಸತಕ್ಕದ್ದು. ಠೇವಣಿ ಪಾವತಿಸದೆ ಹರಾಜಿನಲ್ಲಿ ಭಾಗವಹಿಸುವಂತಿಲ್ಲ.

3) ಟೆಂಡರುಗಳನ್ನು ಸಲ್ಲಿಸಬಯಸುವ ಸಾರ್ವಜನಿಕರು ಮೊಹರು ಮಾಡಿದ ಲಕೋಟೆಯ ಮೇಲ್ಭಾಗದಲ್ಲಿ "ನಿರುಪಯುಕ್ತ ವಾಹನಗಳಿಗಾಗಿ" ಎಂದು ಬರೆದು ಅದರಡಿಯಲ್ಲಿ ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಹಾಸನ ಎಂದು ನಮೂದಿಸಿ ಈ ವಿಳಾಸಕ್ಕೆ ಖುದ್ದಾಗಿ ಇಲ್ಲವೇ ಅಂಚೆ ಮೂಲಕ ದಿನಾಂಕ: 29.12.2005ರಂದು ಸಂಜೆ 4.00 ಗಂಟೆ ಒಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.

4) ಪ್ರತಿಯೊಬ್ಬ ಟೆಂಡರುದಾರರು ಪ್ರತಿ ವಾಹನಕ್ಕೆ ರೂ.3,000-00 (ಮೂರು ಸಾವಿರ) ರೂಪಾಯಿಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಇವರ ಹೆಸರಿನಲ್ಲಿ ತೆಗೆಸಿದ ಡಿ.ಡಿ.ಯನ್ನು ಟೆಂಡರ್ ಜೊತೆ ಲಗತ್ತಿಸಬೇಕು. ಡಿ.ಡಿ. ಯನ್ನು ಕ್ರಾಸ್ ಮಾಡಬಾರದು. ಹಾಗೆ ಮಾಡಿದಲ್ಲಿ ಅದನ್ನು ಅನರ್ಹವೆಂದು ಪರಿಗಣಿಸಲಾಗುವುದು.

5) ಯಾವುದೇ ಠೇವಣಿ ಹಣಕ್ಕೆ ಬಡ್ಡಿ ಕೊಡಲಾಗುವುದಿಲ್ಲ. ಹಾಗೂ ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡಲಾಗುವುದಿಲ್ಲ.

6) ಟೆಂಡರ್ ಫಾರಂನಲ್ಲಿ ಹೆಚ್ಚಿನ ಮೊತ್ತವನ್ನು ಅಂಕಿ ಮತ್ತು ಅಕ್ಷರಗಳೆರಡರಲ್ಲಿಯೂ ಸ್ಪಷ್ಟವಾಗಿ ನಮೂದಿಸಿರಬೇಕು. ಏನಾದರೂ ತಿದ್ದುಪಡಿ ಮಾಡಿದ್ದಲ್ಲಿ ಟೆಂಡರ್‌ದಾರರು ತಮ್ಮ ಪೂರ್ಣ ಸಹಿ ಮಾಡಿ ತಿದ್ದುಪಡಿಯನ್ನು ದೃಢೀಕರಿಸಿರಬೇಕು.

7) ಈ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆ ದಾಖಲುಗೊಳಿಸಿದ ನಂತರ ಸ್ವೀಕೃತವಾದ ಟೆಂಡರ್ ಲಕೋಟೆಗಳನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಅವರಾಗಲೀ ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಗಳಾಗಲೀ ಸಾರ್ವಜನಿಕರ ಸಮ್ಮುಖದಲ್ಲಿ ಬಹಿರಂಗಪಡಿಸುವರು. ಹರಾಜಿನಲ್ಲಿ ದಾಖಲಾದ ಹೆಚ್ಚಿನ ಬಿಡ್ ಬೆಲೆ ಅಥವಾ ಟೆಂಡರಿನಲ್ಲಿ ದಾಖಲಿಸಿದ ಹೆಚ್ಚಿನ ಬೆಲೆ ಇವೆರಡರಲ್ಲಿ ಅತೀ ಹೆಚ್ಚಿನ ದರ ದಾಖಲಿಸಿದವರನ್ನು ಯಶಸ್ವಿ ಟೆಂಡರ್: ಬಿಡ್‌ದಾರರೆಂದು ಪರಿಗಣಿಸಲಾಗುವುದು.

8) ಯಶಸ್ವಿಯಾದವರ ಅಂಗೀಕೃತ ಹೆಚ್ಚಿನ ಬೆಲೆಯಲ್ಲಿ ಶೇಕಡ 25ರಷ್ಟು ಹಣವನ್ನು ಅವರು ಹರಾಜಿನ ಸ್ಥಳದಲ್ಲಿ ಹರಾಜಿನ ದಿನವೇ ತುಂಬತಕ್ಕದ್ದು. ಈ ಹಣಕ್ಕೂ ಯಾವುದೇ ಬಡ್ಡಿ ನೀಡಲಾಗುವುದಿಲ್ಲ. ಡೈರಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರಿಂದ ವಿಲೇವಾರಿಗೆ ಒಪ್ಪಿಗೆ ಬಂದ ನಂತರವೇ ಉಳಿದ ಹಣವನ್ನು ಹಾಗೂ ಮಾರಾಟ ತೆರಿಗೆ ಇತ್ಯಾದಿಯನ್ನು ಕಟ್ಟಿಸಿಕೊಳ್ಳಲಾಗುವುದು. ಹಾಗೂ ಪ್ರಾದೇಶಿಕ ಶುಲ್ಕ ವಗೈರೆ ಅವರ ಸ್ವಂತ ಹಣದಿಂದ ಭರಿಸಿ ಮಾಲೀಕತ್ವ ಬದಲಾವಣೆ ಮಾಡಿಕೊಂಡ ಬಗ್ಗೆ ದಾಖಲಾತಿಗಳನ್ನು ಒದಗಿಸಿದ ನಂತರ ಇಲ್ಲವೇ ವಾಹನ ಉಪಯೋಗಿಸದೇ ಕುಟ್ಟು ಗುಜರಿಗೆ ಹಾಕಲಾಗುವುದೆಂದು ಬರೆದುಕೊಟ್ಟ ಮೇಲೆ ಅವರ ಸ್ವಂತ ಖರ್ಚಿನಲ್ಲಿ ಸಾಗಿಸಿಕೊಳ್ಳಲು ವಾಹನಗಳನ್ನು ಯಶಸ್ವಿದಾರರ ವಶಕ್ಕೆ ವಹಿಸಿಕೊಡಲಾಗುವುದು.

9) ಎಲ್ಲಾ ಹಣವನ್ನು ಪೊಲೀಸ್ ಸೂಪರಿಂಟೆಂಡೆಂಟ್, ಹಾಸನ ಜಿಲ್ಲೆ, ಹಾಸನ ಇವರ ಕಛೇರಿಯ ನಗದು ಶಾಖೆಯಲ್ಲಿ ನಗದಾಗಿಯೇ ತುಂಬಬೇಕು. ಚೆಕ್ ಅಥವಾ ಡಿ.ಡಿ. ಮೂಲಕ ಹಣ ಸ್ವೀಕರಿಸುವುದಿಲ್ಲ.

10) ಅನುಪಯುಕ್ತ ವಾಹನಗಳಿಗೆ ಮಾರಾಟ ತೆರಿಗೆಯನ್ನು ಯಶಸ್ವಿ ಬಿಡ್‌ದಾರರಿಂದ ಚಾಲ್ತಿಯಲ್ಲಿರುವ ನಿಯಮಗಳ ಪ್ರಕಾರ ವಿಧಿಸಿ ವಸೂಲು ಮಾಡಲಾಗುವುದು.

11) ಹರಾಜು ಮುಗಿದ ನಂತರ ಯಶಸ್ವಿಯಾಗದ ಟೆಂಡರು: ಬಿಡ್‌ದಾರರ ಠೇವಣಿ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು. ಸಾರ್ವಜನಿಕರು ಇಲಾಖಾ ನಿಯಮಗಳಿಗೆ ಬದ್ಧರಾಗಿರತಕ್ಕದ್ದು.

12) ಯಶಸ್ವಿಯಾದ ಟೆಂಡರ್: ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವಂತಹ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿರುವ ಹಣದಲ್ಲಿ ನಷ್ಟವನ್ನು ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ರೀತಿ ಕ್ರಮ ಜರುಗಿಸಲಾಗುವುದು.

13) ಈ ಹರಾಜಿನ ವಿಷಯದಲ್ಲಿ ಯಾವುದೇ ಕಾರಣಕ್ಕಾಗಿ ರದ್ದು ಮಾಡುವ ಇಲ್ಲವೇ ತಿರಸ್ಕರಿಸುವ ಅಧಿಕಾರವನ್ನು ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಹಾಸನ ಇವರು ಹೊಂದಿರುತ್ತಾರೆ. ಮತ್ತು ಇವರ ತೀರ್ಮಾನವೇ ಅಂತಿಮವಾದದ್ದು.

14) ಮೇಲೆ ತಿಳಿಸಿರುವ ಹರಾಜಿನ ವಿಷಯದಲ್ಲಿ ಯಾವುದೇ ವಾದ-ವಿವಾದ ಉಂಟಾದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ಇವರು ಮಾಡುವ ನಿರ್ಣಯವೇ ಅಂತಿಮವಾಗಿರುತ್ತದೆ.

15) ಹರಾಜಿನಲ್ಲಿ ಭಾಗವಹಿಸುವ ಎಲ್ಲ ಬಿಡ್‌ದಾರರು ತಮ್ಮ ಪರಿಪೂರ್ಣ ವಿಳಾಸವನ್ನು ಬರೆದಿರುವ ಚೀಟಿಯೊಂದಿಗೆ ಠೇವಣಿ ಹಣವನ್ನು ಪಾವತಿ ಮಾಡಿ ಹೆಸರನ್ನು ನೊಂದಾಯಿಸಿಕೊಳ್ಳತಕ್ಕದ್ದು.

16) ಟೆಂಡರ್ ಫಾರಂಗಳಲ್ಲಿ ಟೆಂಡರುದಾರರು ತಮ್ಮ ಸಂಪೂರ್ಣ ವಿಳಾಸವನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಟೆಂಡರ್ ಫಾರಂ ನಮೂನೆಯನ್ನು ಈ ಕೆಳಗೆ ಕೊಡಲಾಗಿದೆ.

**ಟೆಂಡರ್ ಫಾರಂ ನಮೂನೆ**

**ಅನುಪಯುಕ್ತ ಪೊಲೀಸ್ ವಾಹನಗಳಿಗಾಗಿ ಟೆಂಡರು**

ಗೆ,

ಪೊಲೀಸ್ ಸೂಪರಿಂಟೆಂಡೆಂಟ್ ರವರು,
ಹಾಸನ ಜಿಲ್ಲೆ, ಹಾಸನ.

ಮಾನ್ಯರೇ,

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ: ಪಿಎಂಟಿ:110:02-2005, ದಿನಾಂಕ: .........ರಲ್ಲಿ ತಿಳಿಸಿರುವ.................... ಸಂಖ್ಯೆಯ ವಾಹನವನ್ನು ರೂ.................(ರೂಪಾಯಿ...........................) ಗಳಿಗೆ ಖರೀದಿಸಲು ಇಚ್ಛಿಸಿರುತ್ತೇನೆ.

ತಮ್ಮ ವಿಶ್ವಾಸಿ,
ಬಿಡ್‌ದಾರರ ಪೂರ್ಣ ಸಹಿ ಮತ್ತು ವಿಳಾಸ.

ಸೂಪರಿಂಟೆಂಡೆಂಟ್ ಆಫ್ ಪೊಲೀಸ್,
ಹಾಸನ ಜಿಲ್ಲೆ, ಹಾಸನ.

ಪಿ.ಆರ್.645

**OFFICE OF THE DIRECTOR OF PRE-UNIVERSITY EDUCATION, PALACE ROAD, BANGALORE-1**
**TENDER NOTIFICATION (TWO COVER SYSTEM)**
**No. SUPPLY/ TEN. PAPER/ 2005-06, Dated: 18th November, 2005**

Sealed tenders in the prescribed form in two cover Tender system are invited by the Director. Pre-University Education. Palace Road, Bangalore-1, from the paper manufacturing companies to supply 150 M.T. cream wove 60 GSM 15.7 KG ream weight 61 CMs printing paper in reals required for the departmental printing work.

Last date and time for submitting sealed two cover tender (pre-qualification cover and price bid cover) is 4-00 PM on 15.12.2005. The details of terms and conditions for submission of tenders are notified on the Notice Board at the office of the Director. Pre-University Education, Technical Education Building, Palace Road, Bangalore-1. The tender forms can be had during the office hours from this office Room No.10. Ground floor upto 15.12.2005 1-00 PM by paying Rs.540/- (Rs. Five hundred and forty only including tax) Bank Demand Draft drawn in favour of Director. Sealed tender should accompany a Bank demand draft for Rs.50,000/- towards E.M.D. drawn in favour of the Director, Pre-University Education, Bangalore. Imcomplete tenders or the tenders submitted after the scheduled time and date or without D.D. towards E.M.D. will be rejected without giving any reason. The sealed tenders has to be sent to **Sri Gonal Bhimappa,** IAS, **Director, Pre-University Education, Palace Road, Bangalore-1.** The right to accept or reject the tenders rests with the Director of Pre-University Education. The tenders received will be opened (Pre-qualification tender first cover) in the presence of the tenderer's present at **4-30 PM. On 15.12.2005** in the chambers of Director, Pre-University Education. And the eligible Pre-qualified

tenderers cover (price bid tender second cover) will be opened in the presence of the tenderers present at 4-00 P.M. on 16.12.2005 in the chambers of Director, Pre-University Education.

**GONAL BHIMAPPA, IAS**
Director,
Pre-University Education.

PR-646

**DEPARTMENT OF COMMERCIAL TAXES**
**OFFICE OF THE COMMISSIONER OF COMMERCIAL TAXES, KARNATAKA, VANIJYA THERIGE KARYALAYA, GANDHINAGAR, BANGALORE-560 009**
**FORM-1**
**(See Rule 9)**
**NOTIFICATION**
**No. EST.2A/CR-66/2004-05, Bangalore, Dated: 28th September, 2005**

**Shri HUCCHARAYAPPA,** working as Commercial Tax Inspector (Rule-32) in the Office of the Assistant Commissioner of Commercial Taxes (Vat Audit), Shimoga, Department of Commercial Taxes is permitted to change his name to **JAGADISH H. RAYAPPA.**

Commissioner of Commercial Taxes,
Karnataka, Bangalore.

PD-120

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು-9**
**ನಮೂನೆ-1**
**(9ನೇ ನಿಯಮ ನೋಡಿ)**
**ಸಂಖ್ಯೆ: ಎನ್‌ಆರ್.ಎಸ್.(2):739:04-05, ಬೆಂಗಳೂರು, ದಿನಾಂಕ: 16ನೇ ಜುಲೈ, 2005**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಜಿಲ್ಲಾ ಆಸ್ಪತ್ರೆ ಚಿತ್ರದುರ್ಗ, ಇಲ್ಲಿ ಶುಶ್ರೂಷಕಿಯಾಗಿ ಕೆಲಸ ಮಾಡುತ್ತಿರುವ **ಶ್ರೀಮತಿ ಎಂ. ಕುತೇಜ,** ಇವರ ಹೆಸರನ್ನು **ಶ್ರೀಮತಿ ಬಿ.ಲಕ್ಷ್ಮಿ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ನಿರ್ದೇಶಕರು,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

ಪಿ.ಡಿ. 121

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**
**ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು**
**ರದ್ದತಿ ಆದೇಶ**

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ತಾತ್ಕಾಲಿಕವಾಗಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಆಯ್ಕೆಯಾದ ಶ್ರೀ ಸುಭಾಷ್‌ಚಂದ್ರ, ಜಾಲಹಳ್ಳಿ ಗ್ರಾಮ, ಬೆಂಗಳೂರು. ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 13 SBC 2001, ದಿನಾಂಕ: 21-11-2001 ರನ್ವಯ ಪ್ರಕಟಿಸಿರುವ KCS, (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ ಸಿ ಅಸು ಇ 6 ಸೆನೆನಿ 2001, ದಿನಾಂಕ: 13-2-2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ SWD 132 SAD 97, ದಿನಾಂಕ: 8-2-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ DPAR 13 SBC 2001, ದಿನಾಂಕ: 1-6-2002 (ದಿನಾಂಕ: 14-6-02 ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ.)
5. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆ ದಿನಾಂಕ: 17-8-2002, (ದಿನಾಂಕ: 22-8-02 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
6. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆಗೆ ಸೇರಿದ ಬೆರಳಚ್ಚುಗಾರರ ಎರಡನೇ ತಾತ್ಕಾಲಿಕ ಆಯ್ಕೆ ಪಟ್ಟಿ ದಿನಾಂಕ: 9-1-2004.
7. ಗುಲ್ಬರ್ಗಾ ಜಿಲ್ಲಾಧಿಕಾರಿಗಳಿಗೆ ಬರೆದ ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕ: 19-1-04 ಮತ್ತು ನೆನಪೋಲೆ ದಿನಾಂಕ: 29-4-04 ಹಾಗೂ 30-8-04.
8. ಸದರಿ ಶ್ರೀ ಸುಭಾಷ್ ಚಂದ್ರ ಇವರು ಈ ಕಛೇರಿಗೆ ಸಲ್ಲಿಸಿದ ಮನವಿ ದಿನಾಂಕ: 10-9-2004.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಆರು ಮತ್ತು ಪರಿಶಿಷ್ಟ ಪಂಗಡದ ಒಂದು ಈ ರೀತಿ ಒಟ್ಟು ಏಳು ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವ ಸಲುವಾಗಿ ಉಲ್ಲೇಖ

(1) (2) ಮತ್ತು (4) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳನ್ವಯ ದಿನಾಂಕ: 17-8-2002 ರ ಈ ಕಛೇರಿಯ ಉಲ್ಲೇಖ (5) ರ ಎರಡನೇ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಯಿತು.

ತದನಂತರ ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ಪೈಕಿ ಬೆರಳಚ್ಚುಗಾರರ ಹುದ್ದೆಗೆ ನಿಗದಿ ಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದವರನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಮಾಡಿ ಉಲ್ಲೇಖ (4) ರ ನಿರ್ದೇಶನದಂತೆ 1:1 ರ ಪ್ರಮಾಣದಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (6) ರನ್ವಯ ದಿನಾಂಕ: 9-1-2004 ರಂದು ಪ್ರಕಟಿಸಲಾಯಿತು.

ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯನ್ನು ಅಂತಿಮವಾಗಿ ಆಯ್ಕೆ ಮಾಡುವುದಕ್ಕಾಗಿ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ಅವಶ್ಯಕತೆ ಇದ್ದುದರಿಂದ ಗುಲ್ಬರ್ಗಾ ಜಿಲ್ಲಾಧಿಕಾರಿಗಳಿಗೆ ದಿನಾಂಕ: 19-1-2004 ರಂದು ಈ ಕಛೇರಿಯಿಂದ ಪತ್ರ ಬರೆದು ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕೂಡಲೇ ಕಳುಹಿಸುವಂತೆ ಕೋರಲಾಯಿತು. ತದನಂತರ 29-4-04 ಮತ್ತು 30-8-04 ರಂದು ನೆನಪೋಲೆ ನೀಡಲಾಯಿತು. ಹಾಗೂ ಜಿಲ್ಲಾಧಿಕಾರಿಗಳಿಗೆ ಬರೆದ ಸದರಿ ಪತ್ರದ ಪ್ರತಿಗಳನ್ನು ಕೆಳಕಂಡ ಅಭ್ಯರ್ಥಿಗೂ ಸಹ ಕಳುಹಿಸಿ, ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಒದಗಿಸಬೇಕಾದ ಅಗತ್ಯ ದಾಖಲೆಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ತಕ್ಷಣವೇ ಒದಗಿಸಿ, ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಈ ಕಛೇರಿಗೆ ಕಳುಹಿಸುವ ವ್ಯವಸ್ಥೆ ಮಾಡುವಂತೆ ಈ ಅಭ್ಯರ್ಥಿಗೆ ಸೂಚಿಸಲಾಯಿತು.

ಮೇಲ್ಕಂಡ ನಿರ್ದೇಶನಕ್ಕೆ ಉತ್ತರವಾಗಿ ಸುಭಾಷ್ ಚಂದ್ರ ಇವರು ದಿನಾಂಕ: 10-9-2004 ರಂದು ಉಲ್ಲೇಖ (8) ರನ್ವಯ ಈ ಕಛೇರಿಗೆ ಲಿಖಿತ ಮನವಿಯೊಂದನ್ನು ಸಲ್ಲಿಸಿ ಸದರಿ ಮನವಿಯಲ್ಲಿ ತಾವು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಈಗಾಗಲೇ ಶೀಘ್ರಲಿಪಿಗಾರರೆಂದು ಔಷಧಿ ನಿಯಂತ್ರಣ ಇಲಾಖೆ ಬೆಂಗಳೂರು ಇಲ್ಲಿ ನೇಮಕಾತಿ ಹೊಂದಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಬೆರಳಚ್ಚುಗಾರರಾಗಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಾತಿ ಹೊಂದಲು ಇಷ್ಟವಿರುವುದಿಲ್ಲವೆಂದು ಹಾಗೂ ತಮ್ಮ ಆಯ್ಕೆಯನ್ನು ರದ್ದುಪಡಿಸಿ ತಮ್ಮ ಬದಲಿಗೆ ಬೇರೆ ಅಭ್ಯರ್ಥಿಯನ್ನು ಆಯ್ಕೆ ಮಾಡಿಕೊಳ್ಳಬಹುದೆಂದು ಇದಕ್ಕೆ ತಮ್ಮ ತಕರಾರು ಏನೂ ಇರುವುದಿಲ್ಲವೆಂದು ತಮ್ಮ ಸದರಿ ಮನವಿಯಲ್ಲಿ ಮನವಿ ಮಾಡಿರುತ್ತಾರೆ.

ಮೇಲ್ಕಂಡ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕ: 9-1-2004 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಪರಿಶಿಷ್ಟ ಜಾತಿಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯಾದ ಶ್ರೀ ಸುಭಾಷ್‌ಚಂದ್ರ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವುದು ಉಚಿತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:EST-1-274/01-02, ದಿನಾಂಕ: 16ನೇ ನವೆಂಬರ್, 2005**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕ:9-1-2004 ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಜಾತಿ ಅಭ್ಯರ್ಥಿಯಾದ ಶ್ರೀ ಸುಭಾಷ್‌ಚಂದ್ರ ಇವರ ತಾತ್ಕಾಲಿಕ ಆಯ್ಕೆಯನ್ನು ಅವರ ಕೋರಿಕೆಯಂತೆ ಮುಖ್ಯಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ.

ಕೆಳಕಂಡ ಪರಿಶಿಷ್ಟ ಜಾತಿ ಅಭ್ಯರ್ಥಿಯಾದ ಶ್ರೀ ಸುಭಾಷ್‌ಚಂದ್ರ ಇವರು ಇನ್ನು ಮುಂದೆ ಈ ಇಲಾಖೆಯ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ರೀತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಮತ್ತು ಯಾವುದೇ ರೀತಿಯ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮದಿನಾಂಕ | 21-9-2002 ರ ಅಂತ್ಯಕ್ಕೆ ಅಭ್ಯರ್ಥಿ ವಯಸ್ಸು ವ- ತಿಂ- ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1. | ಸುಭಾಷ್ ಚಂದ್ರ S/o ಲಕ್ಷ್ಮಣ C/o ಶ್ರೀ ಶಾರದಾಂಬ ವಾಣಿಜ್ಯ ವಿದ್ಯಾಶಾಲೆ 47/8 ಕರ್ನಾಟಕ ಸಂಘ ಬಿಲ್ಡಿಂಗ್ 4ನೇ ಅಡ್ಡರಸ್ತೆ ಜಾಲಹಳ್ಳಿ ಗ್ರಾಮ ಬೆಂಗಳೂರು-560013 (ತಾತ್ಕಾಲಿಕ ಆಯ್ಕೆ ಮುಖ್ಯಪಟ್ಟಿ ಕ್ರಮ ಸಂಖ್ಯೆ 2) | 01-04-1972 | 30-05-20 | S.S.L.C: 56.160 ಕನ್ನಡ ಬೆರಳಚ್ಚು ಸೀನಿಯರ್ 82.00 ಒಟ್ಟು 138.160 ಸರಾಸರಿ ಶೇಕಡಾವಾರು ಅಂಕಗಳು 69.080 | ಪರಿಶಿಷ್ಟ ಜಾತಿಯ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿಯಲ್ಲಿನ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸಿದೆ. |

**ಸಿ. ಕೃಷ್ಣಪ್ಪ**

ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ

ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು

## ರದ್ದತಿ ಆದೇಶ

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಯಲ್ಲಿ ತಾತ್ಕಾಲಿಕವಾಗಿ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆಯಾದ ಶ್ರೀಮತಿ ಇಂದಿರಮ್ಮ,, ದೇವರಹಳ್ಳಿ ಸಿರಾ ತಾಲ್ಲೂಕ್ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 13 SBC 2001, ದಿನಾಂಕ: 21-11-2001 ರನ್ವಯ ಪ್ರಕಟಿಸಿರುವ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 6 ಸೆನೆನಿ 2001, ದಿನಾಂಕ: 13-2-2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ SWD 132 SAD 97, ದಿನಾಂಕ: 8-2-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ DPAR 13 SBC 2001, ದಿನಾಂಕ: 1-6-2002 (ದಿನಾಂಕ: 14-6-02 ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ.)
5. ಈ ಕಛೇರಿಯ ಸಮಸಂಖ್ಯೆ ಮೊದಲನೇ ಅಧಿಸೂಚನೆ ದಿನಾಂಕ: 30-1-2002, (ದಿನಾಂಕ: 14-2-2002 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
6. ಈ ಕಛೇರಿಯ ಸಮಸಂಖ್ಯೆ ಮೊದಲನೇ ಅಧಿಸೂಚನೆಗೆ ಸೇರಿದ ಬೆರಳಚ್ಚುಗಾರರ ತಾತ್ಕಾಲಿಕ ಆಯ್ಕೆ ಪಟ್ಟಿ ದಿನಾಂಕ: 8-8-2002.
7. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆ ದಿನಾಂಕ: 17-8-2002, (ದಿನಾಂಕ: 22-8-02 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
8. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆಗೆ ಸೇರಿದ ಬೆರಳಚ್ಚುಗಾರರ ಎರಡನೇ ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕ: 9-1-2004.
9. ತುಮಕೂರು ಜಿಲ್ಲಾಧಿಕಾರಿಗಳಿಗೆ ಬರೆದ ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕ: 8-8-2002 ಹಾಗೂ 19-1-04 ಮತ್ತು ನೆನಪೋಲೆ ದಿನಾಂಕ: 29-4-04 ಹಾಗೂ 30-8-04.
10. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ತುಮಕೂರು ಇವರ ಪತ್ರದ ನಂಬರ್ ಜಿಸಕಅ-ಸಿಂಧುತ್ವ ಸಿಆರ್-272/2002-03 ದಿನಾಂಕ: 8-9-04.
11. ಶ್ರೀಮತಿ ಇಂದಿರಮ್ಮ ಇವರಿಗೆ ಈ ಕಛೇರಿಯಿಂದ ನೀಡಿದ ಸಮಸಂಖ್ಯೆ ಅಂತಿಮ ನೋಟೀಸ್ ದಿನಾಂಕ: 20-9-2004.
12. ಸದರಿ ಶ್ರೀಮತಿ ಇಂದಿರಮ್ಮ ಇವರು ಈ ಕಛೇರಿಗೆ ಸಲ್ಲಿಸಿದ ಮನವಿ ದಿನಾಂಕ: 19-7-2005.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಆರು ಮತ್ತು ಪರಿಶಿಷ್ಟ ಪಂಗಡದ ಒಂದು ಈ ರೀತಿ ಒಟ್ಟು ಏಳು ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವ ಸಲುವಾಗಿ ಉಲ್ಲೇಖ (1) (2) ಮತ್ತು (4) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳನ್ವಯ ದಿನಾಂಕ: 17-8-2002 ರ ಈ ಕಛೇರಿಯ ಉಲ್ಲೇಖ (7) ರ ಎರಡನೇ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಯಿತು.

ತದನಂತರ ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ಪೈಕಿ ಬೆರಳಚ್ಚುಗಾರರ ಹುದ್ದೆಗೆ ನಿಗದಿ ಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದವರನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಮಾಡಿ ಉಲ್ಲೇಖ (4) ರ ನಿರ್ದೇಶನದಂತೆ 1:1 ರ ಪ್ರಮಾಣದಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (8) ರನ್ವಯ ದಿನಾಂಕ: 9-1-2004 ರಂದು ಪ್ರಕಟಿಸಲಾಯಿತು.

ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯನ್ನು ಅಂತಿಮವಾಗಿ ಆಯ್ಕೆ ಮಾಡುವುದಕ್ಕಾಗಿ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ಅವಶ್ಯಕತೆ ಇದ್ದುದರಿಂದ ತುಮಕೂರು ಜಿಲ್ಲಾಧಿಕಾರಿಗಳಿಗೆ ದಿನಾಂಕ: 8-8-2002 ರಿಂದಲೂ ಈ ಕಛೇರಿಯಿಂದ ಪತ್ರ ಬರೆಯುತ್ತಾ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕಳುಹಿಸುವಂತೆ ಕೋರಲಾಗುತ್ತಿತ್ತು. ತದನಂತರ 19-1-04, 29-4-04 ಮತ್ತು 30-8-04 ರಂದು ನೆನಪೋಲೆ ನೀಡಲಾಯಿತು.

ಈ ರೀತಿ ನೆನಪೋಲೆ ನೀಡಿದ ನಂತರ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ತುಮಕೂರು ಇವರು ಉಲ್ಲೇಖ (10) ರ ಅವರ ಪತ್ರದ ಮೂಲಕ ಸದರಿ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಈ ಕಛೇರಿಗೆ ಕಳುಹಿಸಿರುತ್ತಾರೆ.

ಆದರೆ ಉಲ್ಲೇಖ (8) ರನ್ವಯ ದಿನಾಂಕ: 09-01-2004 ರಂದು ಪ್ರಕಟಿಸಿದ ಎರಡನೇ ತಾತ್ಕಾಲಿಕ ಆಯ್ಕೆ ಪಟ್ಟಿಯ ಮುಖ್ಯ ಪಟ್ಟಿಯಲ್ಲಿ ಈಗ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆಯಾಗಿರುವ ಪರಿಶಿಷ್ಟ ಪಂಗಡದ ಇಂದಿರಮ್ಮ ಇವರು ಮೊದಲ ಬಾರಿಗೆ ದಿನಾಂಕ: 30-01-2002 ರ ಈ ಕಛೇರಿಯ ಮೊದಲನೇ ಸಮಸಂಖ್ಯೆ ಅಧಿಸೂಚನೆ ಮೂಲಕ ಈ ಇಲಾಖೆಯಲ್ಲಿ ಮೊದಲ ಬಾರಿಗೆ ಗುರುತಿಸಲ್ಪಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗೆ ಅರ್ಜಿ ಸಲ್ಲಿಸಿದ್ದರ ಮೇರೆ ಇವರನ್ನು ಸಾಮಾನ್ಯ ಅರ್ಹತಾ ಅಭ್ಯರ್ಥಿಯ ಮೀಸಲಾತಿ ಅಡಿಯಲ್ಲಿ

ಜಿ.ಎಂ. ಅಭ್ಯರ್ಥಿ ಎಂದು ದಿನಾಂಕಃ 08-08-2002 ರಂದು ಮೊದಲನೇ ಬಾರಿಗೆ ಪ್ರಕಟಿಸಿದ ಈ ಕಛೇರಿಯ ಸಮಸಂಖ್ಯೆ ತಾತ್ಕಾಲಿಕ ಆಯ್ಕೆಪಟ್ಟಿಯ ಮುಖ್ಯಪಟ್ಟಿಯಲ್ಲಿ ಬೆರಳಚ್ಚುಗಾರರೆಂದು ಆಯ್ಕೆ ಮಾಡಲಾಯಿತು.

ಈಗ ಎರಡನೇ ಬಾರಿಗೆ ಉಲ್ಲೇಖ (8) ರನ್ವಯ ದಿನಾಂಕಃ 09-01-2004 ರಂದು ಪ್ರಕಟಿಸಿರುವ ಎರಡನೇ ತಾತ್ಕಾಲಿಕ ಆಯ್ಕೆಪಟ್ಟಿಯ ಮುಖ್ಯಪಟ್ಟಿಯಲ್ಲೂ ಸಹ ಸದರಿ ಇಂದಿರಮ್ಮ ಇವರನ್ನು ಮಹಿಳಾ ಅಭ್ಯರ್ಥಿಗೆ ಮೀಸಲಿಟ್ಟ ಹುದ್ದೆಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಎರಡನೇ ಬಾರಿಗೆ ಆಯ್ಕೆಮಾಡಿರುವ ಕಾರಣ ಸದರಿಯವರಿಗೆ, ತುಮಕೂರು ಜಿಲ್ಲಾ ನೋಂದಣಾಧಿಕಾರಿಗಳ ಮುಖಾಂತರ ದಿನಾಂಕಃ 20-09-04 ರ ಈ ಕಛೇರಿಯ ಉಲ್ಲೇಖ (11) ರ ಅಂತಿಮ ನೋಟೀಸನ್ನು ಜಾರಿ ಮಾಡಿ ಸದರಿ ನೋಟೀಸ್‌ನಲ್ಲಿ ಇವರನ್ನು ಈ ರೀತಿ ಎರಡು ಬಾರಿ ತಾತ್ಕಾಲಿಕವಾಗಿ ಆಯ್ಕೆ ಮಾಡಿರುವ ವಿಷಯವನ್ನು ಪ್ರಸ್ತಾಪಿಸಿ ಈ ಎರಡು ಆಯ್ಕೆಗಳ ಪೈಕಿ ಮೊದಲನೇ ಬಾರಿಗೆ ಬ್ಯಾಕ್‌ಲಾಗ್ ಹುದ್ದೆ ಅಡಿಯಲ್ಲಿ ಬೆರಳಚ್ಚುಗಾರರಾಗಿ ಸಾಮಾನ್ಯ ಅರ್ಹತಾ ಅಭ್ಯರ್ಥಿಗೆ ಮೀಸಲಿಟ್ಟ ಹುದ್ದೆಯಲ್ಲಿ ಆಯ್ಕೆಯಾಗಿರುವ ಪ್ರಕಾರ G.M. ಅಭ್ಯರ್ಥಿಯಾಗಿ ಆಯ್ಕೆ ಹೊಂದಲು ಇಚ್ಚಿಸುವಿರೋ ? ಅಥವಾ ಎರಡನೇ ಬಾರಿಗೆ ಮಹಿಳಾ ಅಭ್ಯರ್ಥಿಗೆ ಮೀಸಲಿಟ್ಟ ಹುದ್ದೆಯಲ್ಲಿ ಆಯ್ಕೆಯಾಗಿರುವ ಪ್ರಕಾರ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆ ಹೊಂದಲು ಇಚ್ಚಿಸುವಿರೋ ? ಎಂಬ ಬಗ್ಗೆ ಸದರಿ ನೋಟೀಸ್ ತಲುಪಿದ ದಿನಾಂಕದಿಂದ ಮೂವತ್ತು ದಿನಗಳಲ್ಲಿ ಲಿಖಿತ ಅಭಿಪ್ರಾಯವನ್ನು ಸಲ್ಲಿಸುವಂತೆ ಸದರಿ ಇಂದಿರಮ್ಮ ಇವರಿಗೆ ಸೂಚಿಸಲಾಯಿತು.

ಈ ಕಛೇರಿಯ ಉಲ್ಲೇಖ (11) ರ ನೋಟೀಸನ್ನು ದಿನಾಂಕಃ 28-09-2004 ರಂದು ಖುದ್ದಾಗಿ ಸ್ವೀಕರಿಸಿದ ಸದರಿ ಇಂದಿರಮ್ಮ ಇವರು ದಿನಾಂಕಃ 19-7-2005 ರಂದು ಉಲ್ಲೇಖ (12) ರನ್ವಯ ಈ ಬಗ್ಗೆ ಈ ಕಛೇರಿಗೆ ಸಲ್ಲಿಸಿದ ತಮ್ಮ ಮನವಿಯಲ್ಲಿ ತಾವು ಈಗಾಗಲೇ ಡಿಪ್ಯೂಟಿ ರಿಜಿಸ್ಟ್ರಾರ್ ಆಫ್ ಕೋ-ಆಪರೇಟೀವ್ ಇಲಾಖೆ ತುಮಕೂರು ಇಲ್ಲಿ ಶೀಘ್ರಲಿಪಿಗಾರರಾಗಿ ಕೆಲಸ ಮಾಡುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ಮೊದಲನೆ ಬಾರಿಗೆ ಆಯ್ಕೆಯಾಗಿರುವ ಪ್ರಕಾರ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ನೇಮಕಾತಿ ಹೊಂದಲು ತಮಗೆ ಇಷ್ಟವಿಲ್ಲವೆಂದು ಮತ್ತು ಎರಡನೇ ಬಾರಿಗೆ ಆಯ್ಕೆಯಾಗಿರುವ ಪ್ರಕಾರ ಮಹಿಳಾ ಅಭ್ಯರ್ಥಿಯಾಗಿಯೂ ತಮಗೆ ನೇಮಕಾತಿ ಹೊಂದಲು ಇಷ್ಟವಿಲ್ಲವೆಂದು ಹಾಗೂ ತಮ್ಮ ಈ ಎರಡೂ ರೀತಿಯ ಆಯ್ಕೆಗಳನ್ನು ರದ್ದುಪಡಿಸಿ ಈ ಎರಡೂ ಆಯ್ಕೆಗಳಲ್ಲಿ ತಮ್ಮ ಬದಲಿಗೆ ಬೇರೆ ಅಭ್ಯರ್ಥಿಗಳನ್ನು ಬೆರಳಚ್ಚುಗಾರರಾಗಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಆಯ್ಕೆ ಮಾಡಿಕೊಳ್ಳಲು ತಮ್ಮ ತಕರಾರು ಏನೂ ಇರುವುದಿಲ್ಲವೆಂದು ಉಲ್ಲೇಖ (12) ರ ತಮ್ಮ ಮನವಿಯಲ್ಲಿ ಮನವಿ ಮಾಡಿರುತ್ತಾರೆ.

ಮೇಲ್ಕಂಡ ಕಾರಣಗಳಿಂದ ಉಲ್ಲೇಖ (8) ರನ್ವಯ ದಿನಾಂಕಃ 9-1-2004 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಎರಡನೇ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯಾದ ಶ್ರೀಮತಿ ಇಂದಿರಮ್ಮ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವುದು ಉಚಿತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:EST-1-274/01-02, ದಿನಾಂಕ: 16ನೇ ನವೆಂಬರ್, 2005**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (8) ರನ್ವಯ ದಿನಾಂಕ:9-1-2004 ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಪಂಗಡದ ಅಭ್ಯರ್ಥಿಯಾದ ಶ್ರೀಮತಿ ಇಂದಿರಮ್ಮ ಇವರ ತಾತ್ಕಾಲಿಕ ಆಯ್ಕೆಯನ್ನು ಅವರ ಕೋರಿಕೆಯಂತೆ ಮುಖ್ಯಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ.

ಕೆಳಕಂಡ ಪರಿಶಿಷ್ಟ ಪಂಗಡದ ಅಭ್ಯರ್ಥಿಯಾದ ಶ್ರೀಮತಿ ಇಂದಿರಮ್ಮ ಇವರು ಇನ್ನು ಮುಂದೆ ಈ ಇಲಾಖೆಯ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ರೀತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಮತ್ತು ಯಾವುದೇ ರೀತಿಯ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| **ಕ್ರ. ಸಂ.** | **ಅಭ್ಯರ್ಥಿಯ ಹೆಸರು ಮತ್ತು ವಿಳಾಸ** | **ಜನ್ಮದಿನಾಂಕ** | **21-9-2002 ರ ಅಂತ್ಯಕ್ಕೆ ಅಭ್ಯರ್ಥಿ ವಯಸ್ಸು ವ- ತಿಂ- ದಿ** | **ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು** | **ಷರಾ** |
|---|---|---|---|---|---|
| 1. | ಇಂದಿರಮ್ಮ D/o ದೊಡ್ಡತಿಮ್ಮಯ್ಯ ದೇವರಹಳ್ಳಿ ಚಿಕ್ಕನಹಳ್ಳಿ ಪೋಸ್ಟ್ ಸಿರಾ ತಾಲ್ಲೂಕ್ ತುಮಕೂರು ಜಿಲ್ಲೆ-572125 (ತಾತ್ಕಾಲಿಕ ಆಯ್ಕೆ ಮುಖ್ಯ ಪಟ್ಟಿ ಕ್ರಮ ಸಂಖ್ಯೆ 1) | 20-6-1972 | 30-03-01 | S.S.L.C 40.833 ಕನ್ನಡ ಬೆರಳಚ್ಚು **ಸೀನಿಯರ್ 86.000** **ಒಟ್ಟು 126.833** **ಸರಾಸರಿ ಶೇಕಡಾವಾರು ಅಂಕಗಳು 63.417** | ಪರಿಶಿಷ್ಟ ಪಂಗಡದ ಮಹಿಳಾ ಅಭ್ಯರ್ಥಿಯಾಗಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿನ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸಿದೆ. |

**ಸಿ. ಕೃಷ್ಣಪ್ಪ**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ
ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ,**

**7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು**

**ರದ್ದತಿ ಆದೇಶ**

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ತಾತ್ಕಾಲಿಕವಾಗಿ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆಯಾದ ಶ್ರೀಮತಿ H. ಜಯಲಕ್ಷ್ಮಿ ಹಳೇಗುಡ್ಡದಹಳ್ಳಿ ಬೆಂಗಳೂರು ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 13 SBC 2001, ದಿನಾಂಕ: 21-11-2001 ರನ್ವಯ ಪ್ರಕಟಿಸಿರುವ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ ಸಿ ಅಸು ಇ 6 ಸೆನೆನಿ 2001, ದಿನಾಂಕ: 13-2-2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ SWD 132 SAD 97, ದಿನಾಂಕ: 8-2-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ DPAR 13 SBC 2001, ದಿನಾಂಕ: 1-6-2002 (ದಿನಾಂಕ: 14-6-02 ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ.)
5. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆ ದಿನಾಂಕ: 17-8-2002, (ದಿನಾಂಕ: 22-8-02 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
6. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆಗೆ ಸೇರಿದ ಬೆರಳಚ್ಚುಗಾರರ ಎರಡನೇ ತಾತ್ಕಾಲಿಕ ಆಯ್ಕೆ ಪಟ್ಟಿ ದಿನಾಂಕ: 9-1-2004.
7. ಮಂಡ್ಯ ಜಿಲ್ಲಾಧಿಕಾರಿಗಳಿಗೆ ಬರೆದ ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕ: 19-1-2004 ಮತ್ತು ನೆನಪೋಲೆ ದಿನಾಂಕ: 29-4-2004.
8. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಮಂಡ್ಯ ಇವರ ಪತ್ರ ಸಂಖ್ಯೆ: ಜಿಸಕಅ/ಸಿಂಧುತ್ವ/ಸಿಆರ್/198/2003-04 ದಿನಾಂಕ: 11-8-2004.
9. ಶ್ರೀಮತಿ H. ಜಯಲಕ್ಷ್ಮಿ ಇವರಿಗೆ ಈ ಕಛೇರಿಯಿಂದ ನೀಡಿದ ಸಮಸಂಖ್ಯೆ: ಅಂತಿಮ ನೋಟೀಸ್ ದಿನಾಂಕ: 25-10-2004.
10. ಸದರಿ ಶ್ರೀಮತಿ H.ಜಯಲಕ್ಷ್ಮಿ ಇವರು ಈ ಕಛೇರಿಗೆ ಸಲ್ಲಿಸಿದ ಮನವಿ ದಿನಾಂಕ: 20-1-2005.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಆರು ಮತ್ತು ಪರಿಶಿಷ್ಟ ಪಂಗಡದ ಒಂದು ಈ ರೀತಿ ಒಟ್ಟು ಏಳು ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವ ಸಲುವಾಗಿ ಉಲ್ಲೇಖ (1) (2) ಮತ್ತು (4) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳನ್ವಯ ದಿನಾಂಕ: 17-8-2002 ಈ ಕಛೇರಿಯ ಉಲ್ಲೇಖ (5) ರ ಎರಡನೇ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಯಿತು.

ತದನಂತರ ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ಪೈಕಿ ಬೆರಳಚ್ಚುಗಾರರ ಹುದ್ದೆಗೆ ನಿಗದಿ ಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದವರನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಮಾಡಿ ಉಲ್ಲೇಖ (4) ರ ನಿರ್ದೇಶನದಂತೆ 1:1 ರ ಪ್ರಮಾಣದಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (6) ರನ್ವಯ ದಿನಾಂಕ: 9-1-2004 ರಂದು ಪ್ರಕಟಿಸಲಾಯಿತು.

ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯನ್ನು ಅಂತಿಮವಾಗಿ ಆಯ್ಕೆ ಮಾಡುವುದಕ್ಕಾಗಿ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ಅವಶ್ಯಕತೆ ಇದ್ದುದರಿಂದ ಮಂಡ್ಯ ಜಿಲ್ಲಾಧಿಕಾರಿಗಳಿಗೆ ದಿನಾಂಕ: 19-1-2004 ರಂದು ಈ ಕಛೇರಿಯಿಂದ ಪತ್ರ ಬರೆದು ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕೂಡಲೇ ಕಳುಹಿಸುವಂತೆ ಕೋರಲಾಯಿತು. ತದನಂತರ 29-4-04 ರಂದು ನೆನಪೋಲೆ ನೀಡಲಾಯಿತು.

ಈ ರೀತಿ ನೆನಪೋಲೆ ನೀಡಿದ ನಂತರ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಮಂಡ್ಯ ಇವರು ಉಲ್ಲೇಖ (8) ರ ಅವರ ಪತ್ರದ ಮೂಲಕ ಸದರಿ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಈ ಕಛೇರಿಗೆ ಕಳುಹಿಸುತ್ತಾ, ಈ ಅಭ್ಯರ್ಥಿಯು ಈಗ ಕರ್ನಾಟಕ ಭೂ ಸೇನಾ ನಿಗಮ ನಿಯಮಿತ ಬೆಂಗಳೂರು ಇಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಈಗಾಗಲೇ ಬೆರಳಚ್ಚುಗಾರರೆಂದು ನೇಮಕಾತಿ ಹೊಂದಿ ಕಾರ್ಯ ನಿರ್ವಹಿಸುತ್ತಿರುವರೆಂದು ವರದಿ ಮಾಡಿದ್ದರ ಮೇರೆ, ಸದರಿ ಭೂ ಸೇನಾ ನಿಗಮಕ್ಕೆ ಪತ್ರ ವ್ಯವಹಾರ ಮಾಡಲಾಗಿ, ಈ ಅಭ್ಯರ್ಥಿಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಬೆಂಗಳೂರು ಇಲ್ಲಿ ಬೆರಳಚ್ಚುಗಾರರಾಗಿರುವರೆಂದು ತಿಳಿಸಿದ್ದರ ಮೇರೆ ಸದರಿ ಅಭ್ಯರ್ಥಿಗೆ ದಿನಾಂಕ: 25-10-2004 ರನ್ವಯ ಈ ಕಛೇರಿಯಿಂದ ಉಲ್ಲೇಖ (9) ರನ್ವಯ ಅಂತಿಮ ನೋಟೀಸ್ ಅನ್ನು ಜಾರಿ ಮಾಡಿ ಸದರಿ ನೋಟೀಸ್‌ನಲ್ಲಿ, ಈ ಅಭ್ಯರ್ಥಿಯು ಈಗಾಗಲೇ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ಸದರಿ ನಿಗಮದಲ್ಲಿ ಕೆಲಸ ಮಾಡುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ನೇಮಕ ಹೊಂದಲು ಇಚ್ಛೆ ಇದೆಯೇ? ಅಥವಾ ಇಲ್ಲವೇ? ಎಂಬ ಬಗ್ಗೆ ಲಿಖಿತ ಅಭಿಪ್ರಾಯವನ್ನು ಈ ಕಛೇರಿಗೆ ಸಲ್ಲಿಸುವಂತೆ ಸದರಿ ಅಭ್ಯರ್ಥಿಗೆ ನಿರ್ದೇಶಿಸಲಾಯಿತು.

ಈ ಕಛೇರಿಯ ಸದರಿ ನೋಟೀಸನ್ನು ಖುದ್ದಾಗಿ ದಿನಾಂಕಃ 20-1-05 ರಂದು ಸ್ವೀಕರಿಸಿದ ಇವರು ದಿನಾಂಕಃ 20-1-05 ರಂದು ಉಲ್ಲೇಖ (10) ರನ್ವಯ ಈ ಕಛೇರಿಗೆ ಸಲ್ಲಿಸಿದ ತಮ್ಮ ಲಿಖಿತ ಮನವಿಯಲ್ಲಿ ತಾವು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಈಗಾಗಲೇ ಬೆಸ್ಕಾಂ ಲಾಜರ್ ರಸ್ತೆ, ಬೆಂಗಳೂರು ಇಲ್ಲಿ ಬೆರಳಚ್ಚುಗಾರರಾಗಿ ಕೆಲಸ ಮಾಡುತ್ತಿರುವುದರಿಂದ ತಮಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ನೇಮಕಾತಿ ಹೊಂದಲು ಇಷ್ಟವಿಲ್ಲವೆಂದು ತಿಳಿಸುತ್ತಾ ತಮ್ಮ ಆಯ್ಕೆಯನ್ನು ರದ್ದುಪಡಿಸಿ ಬೇರೆಯವರನ್ನು ಆಯ್ಕೆ ಮಾಡಿಕೊಳ್ಳಬಹುದೆಂದು ಇದಕ್ಕೆ ತಮ್ಮ ತಕರಾರು ಏನೂ ಇರುವುದಿಲ್ಲವೆಂದು ಸದರಿ ಮನವಿಯಲ್ಲಿ ಮನವಿ ಮಾಡಿರುತ್ತಾರೆ.

ಮೇಲ್ಕಂಡ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕಃ 9-1-2004 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಪರಿಶಿಷ್ಟ ಜಾತಿಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯಾದ ಶ್ರೀಮತಿ H. ಜಯಲಕ್ಷ್ಮಿ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವುದು ಉಚಿತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:EST-1-274/01-02, ದಿನಾಂಕ: 16ನೇ ನವೆಂಬರ್, 2005**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕಃ9-1-2004 ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಜಾತಿ ಅಭ್ಯರ್ಥಿಯಾದ ಶ್ರೀಮತಿ H. ಜಯಲಕ್ಷ್ಮಿ ಇವರ ತಾತ್ಕಾಲಿಕ ಆಯ್ಕೆಯನ್ನು ಅವರ ಕೋರಿಕೆಯಂತೆ ಮುಖ್ಯಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ.

ಕೆಳಕಂಡ ಪರಿಶಿಷ್ಟ ಜಾತಿ ಅಭ್ಯರ್ಥಿಯಾದ ಶ್ರೀಮತಿ H. ಜಯಲಕ್ಷ್ಮಿ ಇವರು ಇನ್ನು ಮುಂದೆ ಈ ಇಲಾಖೆಯ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ರೀತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಮತ್ತು ಯಾವುದೇ ರೀತಿಯ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮದಿನಾಂಕ | 21-9-2002 ರ ಅಂತ್ಯಕ್ಕೆ ಅಭ್ಯರ್ಥಿ ವಯಸ್ಸು ವ- ತಿಂ- ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1. | H. ಜಯಲಕ್ಷ್ಮಿ W/o H.K. ರಾಜಣ್ಣ ನಂ. 161/10 5ನೇ ಮುಖ್ಯ ರಸ್ತೆ, ಹಳೇಗುಡ್ಡದಹಳ್ಳಿ, ಕಾವೇರಿ ವೃದ್ಧಾಶ್ರಮ ಹಿಂಭಾಗ, ಬೆಂಗಳೂರು-560026. (ತಾತ್ಕಾಲಿಕ ಆಯ್ಕೆ ಮುಖ್ಯ ಪಟ್ಟಿ ಕ್ರಮ ಸಂಖ್ಯೆ 3) | 01-06-1972 | 30-03-20 | S.S.L.C: 50.833 ಕನ್ನಡ ಬೆರಳಚ್ಚು **ಸೀನಿಯರ್ 86.500** **ಒಟ್ಟು 137.333** ಸರಾಸರಿ ಶೇಕಡಾವಾರು ಅಂಕಗಳು 68.667 | ಪರಿಶಿಷ್ಟ ಜಾತಿಯ ಮಹಿಳಾ ಅಭ್ಯರ್ಥಿಯಾಗಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿಯಲ್ಲಿನ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸಿದೆ. |

**ಸಿ. ಕೃಷ್ಣಪ್ಪ**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ
ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ

## ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು

## ರದ್ದತಿ ಆದೇಶ

**ವಿಷಯ ಃ** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ತಾತ್ಕಾಲಿಕವಾಗಿ ಗ್ರಾಮೀಣ ಅಭ್ಯರ್ಥಿಯಾಗಿ ಆಯ್ಕೆಯಾದ ಶ್ರೀ ಕೆ. ಮರಿಸ್ವಾಮಿ ಹಾಡ್ಲಿ ಗ್ರಾಮ, ಮಳವಳ್ಳಿ ತಾಲ್ಲೂಕು ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ ಃ**
1. ಸರ್ಕಾರದ ಅಧಿಸೂಚನೆ ಸಂಖ್ಯೆಃ DPAR 13 SBC 2001, ದಿನಾಂಕಃ 21-11-2001 ರನ್ವಯ ಪ್ರಕಟಿಸಿರುವ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ ಸಿ ಆಸು ಇ 6 ಸೆನೆಸಿ 2001, ದಿನಾಂಕಃ 13-2-2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ SWD 132 SAD 97, ದಿನಾಂಕಃ 8-2-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ DPAR 13 SBC 2001, ದಿನಾಂಕಃ 1-6-2002 (ದಿನಾಂಕಃ 14-6-02 ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ.)

5. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆ ದಿನಾಂಕಃ 17-8-2002, (ದಿನಾಂಕಃ 22-8-02 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
6. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆಗೆ ಸೇರಿದ ಬೆರಳಚ್ಚುಗಾರರ ಎರಡನೇ ತಾತ್ಕಾಲಿಕ ಆಯ್ಕೆ ಪಟ್ಟಿ ದಿನಾಂಕಃ 9-1-2004.
7. ಮಂಡ್ಯ ಜಿಲ್ಲಾಧಿಕಾರಿಗಳಿಗೆ ಬರೆದ ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕಃ 19-1-04 ಮತ್ತು ನೆನಪೋಲೆ ದಿನಾಂಕಃ 29-4-04.
8. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಮಂಡ್ಯ ಇವರ ಪತ್ರ ಸಂಖ್ಯೆಃಜಿಸಕಅ-ಸಿಂಧುತ್ವ-ಸಿಆರ್-199ಃ 2003-04 ದಿನಾಂಕಃ 16-06-2004.
9. ಸದರಿ ಶ್ರೀ ಕೆ. ಮರಿಸ್ವಾಮಿ ಇವರು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಮಂಡ್ಯ ಇವರಿಗೆ ಸಲ್ಲಿಸಿದ ಮನವಿ ದಿನಾಂಕಃ 15-6-2004.

**ಪ್ರಸ್ತಾವನೆಃ**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಆರು ಮತ್ತು ಪರಿಶಿಷ್ಟ ಪಂಗಡದ ಒಂದು ಈ ರೀತಿ ಒಟ್ಟು ಏಳು ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವ ಸಲುವಾಗಿ ಉಲ್ಲೇಖ (1) (2) ಮತ್ತು (4) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳನ್ವಯ ದಿನಾಂಕಃ 17-8-2002 ರ ಈ ಕಛೇರಿಯ ಉಲ್ಲೇಖ (5) ರ ಎರಡನೇ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಯಿತು.

ತದನಂತರ ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ಪೈಕಿ ಬೆರಳಚ್ಚುಗಾರರ ಹುದ್ದೆಗೆ ನಿಗದಿ ಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದವರನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಮಾಡಿ ಉಲ್ಲೇಖ (4) ರ ನಿರ್ದೇಶನದಂತೆ 1ಃ1 ರ ಪ್ರಮಾಣದಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (6) ರನ್ವಯ ದಿನಾಂಕಃ 9-1-2004 ರಂದು ಪ್ರಕಟಿಸಲಾಯಿತು.

ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯನ್ನು ಅಂತಿಮವಾಗಿ ಆಯ್ಕೆ ಮಾಡುವುದಕ್ಕಾಗಿ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ಅವಶ್ಯಕತೆ ಇದ್ದುದರಿಂದ ಮಂಡ್ಯ ಜಿಲ್ಲಾಧಿಕಾರಿಗಳಿಗೆ ದಿನಾಂಕಃ 19-1-2004 ರಂದು ಈ ಕಛೇರಿಯಿಂದ ಪತ್ರ ಬರೆದು ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕೂಡಲೇ ಕಳುಹಿಸುವಂತೆ ಕೋರಲಾಯಿತು. ತದನಂತರ 29-4-04 ರಂದು ನೆನಪೋಲೆ ಸಹ ನೀಡಲಾಯಿತು.

ಈ ರೀತಿ ನೆನಪೋಲೆ ನೀಡಿದ ನಂತರ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಮಂಡ್ಯ ಇವರು ಉಲ್ಲೇಖ (8) ರ ಅವರ ಪತ್ರದಲ್ಲಿ ಜಾತಿ ಸಿಂಧುತ್ವ ಪ್ರಮಾಣ ಪತ್ರ ನೀಡುವುದಕ್ಕಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳನ್ನು ಸಲ್ಲಿಸುವಂತೆ ಈ ಅಭ್ಯರ್ಥಿಗೆ ದಿನಾಂಕಃ 10-02-2004, 24-03-04 ಮತ್ತು 11-05-04 ರಂದು ಲಿಖಿತ ಮೂಲಕ ಪತ್ರಗಳನ್ನು ಬರೆಯಲಾಯಿತೆಂದು ವರದಿ ಮಾಡುತ್ತಾ, ಇದಕ್ಕೆ ಉತ್ತರವಾಗಿ ಸದರಿ ಅಭ್ಯರ್ಥಿಯು ಉಲ್ಲೇಖ (9) ರನ್ವಯ ದಿನಾಂಕಃ 15-06-2004 ರಂದು ಲಿಖಿತ ಮನವಿ ಸಲ್ಲಿಸಿ ತಮಗೆ ಬೇರೆ ಇಲಾಖೆಯಲ್ಲಿ ಉದ್ಯೋಗ ದೊರಕಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಕೆಲಸಕ್ಕೆ ಸೇರಲು ಇಚ್ಛೆ ಇರುವುದಿಲ್ಲವೆಂದು ಹಾಗೂ ತಮಗೆ ಜಾತಿ ಸಿಂಧುತ್ವ ಪತ್ರದ ಅವಶ್ಯಕತೆ ಇರುವುದಿಲ್ಲವೆಂದು ಸದರಿ ಅಭ್ಯರ್ಥಿಯು ಸದರಿ ಸಮಾಜ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಿರುವ ಮನವಿಯ ಪ್ರತಿಯನ್ನು ಸದರಿ ಮಂಡ್ಯ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಈ ಕಛೇರಿಗೆ ಕಳುಹಿಸುತ್ತಾ ಈ ಕಾರಣದಿಂದ ಈ ಅಭ್ಯರ್ಥಿಗೆ ಜಾತಿ ಸಿಂಧುತ್ವ ಪತ್ರವನ್ನು ನೀಡಲು ಬರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಮೇಲ್ಕಂಡ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕಃ 9-1-2004 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಪರಿಶಿಷ್ಟ ಜಾತಿಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಗ್ರಾಮೀಣ ಅಭ್ಯರ್ಥಿ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯಾದ ಶ್ರೀ ಕೆ. ಮರಿಸ್ವಾಮಿ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವುದು ಉಚಿತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:EST-1-274/01-02, ದಿನಾಂಕ: 16ನೇ ನವೆಂಬರ್, 2005**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕಃ9-1-2004 ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯಲ್ಲಿ ಗ್ರಾಮೀಣ ಅಭ್ಯರ್ಥಿಯಾಗಿ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಜಾತಿ ಅಭ್ಯರ್ಥಿಯಾದ ಶ್ರೀ ಕೆ. ಮರಿಸ್ವಾಮಿ ಇವರ ತಾತ್ಕಾಲಿಕ ಆಯ್ಕೆಯನ್ನು ಅವರ ಕೋರಿಕೆಯಂತೆ ಮುಖ್ಯಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ.

ಕೆಳಕಂಡ ಪರಿಶಿಷ್ಟ ಜಾತಿ ಅಭ್ಯರ್ಥಿಯಾದ ಶ್ರೀ ಕೆ. ಮರಿಸ್ವಾಮಿ ಇವರು ಇನ್ನು ಮುಂದೆ ಈ ಇಲಾಖೆಯ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ರೀತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಮತ್ತು ಯಾವುದೇ ರೀತಿಯ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮದಿನಾಂಕ | 21-9-2002 ರ ಅಂತ್ಯಕ್ಕೆ ಅಭ್ಯರ್ಥಿ ವಯಸ್ಸು ವ- ತಿಂ- ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1. | ಕೆ.ಮರಿಸ್ವಾಮಿ<br>S/o ಕೆಂಚಯ್ಯ<br>ಹಾಡ್ಲಿ ಗ್ರಾಮ<br>ಹಾಡ್ಲಿ ಅಂಚೆ<br>ಮಳವಳ್ಳಿ ತಾಲ್ಲೂಕ್<br>ಮಂಡ್ಯ ಜಿಲ್ಲೆ.<br>(ತಾತ್ಕಾಲಿಕ ಆಯ್ಕೆ ಮುಖ್ಯ ಪಟ್ಟಿ ಕ್ರಮ ಸಂಖ್ಯೆ 5) | 03-02-1973 | 29-07-18 | S.S.L.C: 44.333<br>ಕನ್ನಡ ಬೆರಳಚ್ಚು<br>**ಸೀನಿಯರ್ 86.500**<br>**ಒಟ್ಟು 130.833**<br><br>ಸರಾಸರಿ<br>ಶೇಕಡಾವಾರು<br>ಅಂಕಗಳು 63.417 | ಪರಿಶಿಷ್ಟ ಜಾತಿಯ ಗ್ರಾಮೀಣ ಅಭ್ಯರ್ಥಿಯಾಗಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿ ಯಲ್ಲಿನ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸಿದೆ. |

**ಸಿ. ಕೃಷ್ಣಪ್ಪ**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ
ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು,
ಬೆಂಗಳೂರು.

## ನೋಂದಣಿ ಮತ್ತು ಮುದ್ರಾಂಕ ಇಲಾಖೆ
## ನೋಂದಣಿ ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು
## ರದ್ದತಿ ಆದೇಶ

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ತಾತ್ಕಾಲಿಕವಾಗಿ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆಯಾದ ಶ್ರೀಮತಿ ಸುವರ್ಣ ತೆಲಗಾಂವ ಚಡಚಣ, ತಾಲ್ಲೂಕ್ ಇಂಡಿ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 13 SBC 2001, ದಿನಾಂಕ: 21-11-2001 ರನ್ವಯ ಪ್ರಕಟಿಸಿರುವ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ ಸಿ ಅಸು ಇ 6 ಸೆನೆನಿ 2001 ದಿನಾಂಕ: 13-2-2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ SWD 132 SAD 97 ದಿನಾಂಕ: 8-2-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ DPAR 13 SBC 2001 ದಿನಾಂಕ: 1-6-2002 (ದಿನಾಂಕ: 14-6-02 ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ.)
5. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆ ದಿನಾಂಕ: 17-8-2002 (ದಿನಾಂಕ: 22-8-02 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ)
6. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆಗೆ ಸೇರಿದ ಬೆರಳಚ್ಚುಗಾರರ ಎರಡನೇ ತಾತ್ಕಾಲಿಕ ಆಯ್ಕೆ ಪಟ್ಟಿ ದಿನಾಂಕ: 9-1-2004.
7. ಬಿಜಾಪುರ ಜಿಲ್ಲಾಧಿಕಾರಿಗಳಿಗೆ ಬರೆದ ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕ: 19-1-04 ಮತ್ತು ನೆನಪೋಲೆ ದಿನಾಂಕ: 29-4-04 ಹಾಗೂ 30-8-2004.
8. ಶ್ರೀಮತಿ ಸುವರ್ಣಾ ತೆಲಗಾಂವ್ ಇವರಿಗೆ ಈ ಕಛೇರಿಯಿಂದ ನೀಡಿದ ಸಮಸಂಖ್ಯೆ ಅಂತಿಮ ನೋಟೀಸ್ ದಿನಾಂಕ: 25-10-04.
9. ಸದರಿ ಶ್ರೀಮತಿ ಸುವರ್ಣಾ ತೆಲಗಾಂವ ಇವರು ಈ ಕಛೇರಿಗೆ ಸಲ್ಲಿಸಿದ ಮನವಿ ದಿನಾಂಕ: 4-12-2004.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬೆರಳಚ್ಚುಗಾರರ ಕೇಡರ್‌ನಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಆರು ಮತ್ತು ಪರಿಶಿಷ್ಟ ಪಂಗಡದ ಒಂದು ಈ ರೀತಿ ಒಟ್ಟು ಏಳು ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವ ಸಲುವಾಗಿ ಉಲ್ಲೇಖ (1) (2) ಮತ್ತು (4) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳನ್ವಯ ದಿನಾಂಕ: 17-8-2002 ರ ಈ ಕಛೇರಿಯ ಉಲ್ಲೇಖ (5) ರ ಎರಡನೇ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಯಿತು.

ತದನಂತರ ಈ ಬಗ್ಗೆ ಸ್ವೀಕೃತವಾದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ ಉಲ್ಲೇಖ (1) ರ ಬ್ಯಾಕ್‌ಲಾಗ್ ನಿಯಮಗಳನ್ವಯ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳ ಪೈಕಿ ಬೆರಳಚ್ಚುಗಾರರ ಹುದ್ದೆಗೆ ನಿಗದಿ ಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದವರನ್ನು Merit ಮತ್ತು ಮೀಸಲಾತಿ ಆಧಾರದ ಮೇಲೆ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಮಾಡಿ ಉಲ್ಲೇಖ (4) ರ ನಿರ್ದೇಶನದಂತೆ 1:1 ರ ಪ್ರಮಾಣದಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (6) ರನ್ವಯ ದಿನಾಂಕ: 9-1-2004 ರಂದು ಪ್ರಕಟಿಸಲಾಯಿತು.

ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯನ್ನು ಅಂತಿಮವಾಗಿ ಆಯ್ಕೆ ಮಾಡುವುದಕ್ಕಾಗಿ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ಅವಶ್ಯಕತೆ ಇದ್ದುದರಿಂದ ಬಿಜಾಪುರ ಜಿಲ್ಲಾಧಿಕಾರಿಗಳಿಗೆ ದಿನಾಂಕಃ 19-1-2004 ರಂದು ಈ ಕಛೇರಿಯಿಂದ ಪತ್ರ ಬರೆದು ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕೂಡಲೇ ಕಳುಹಿಸುವಂತೆ ಕೋರಲಾಯಿತು. ತದನಂತರ 29-4-04 ಮತ್ತು 30-8-04 ರಂದು ನೆನಪೋಲೆ ಸಹ ನೀಡಲಾಯಿತು. ಹಾಗೂ ಜಿಲ್ಲಾಧಿಕಾರಿಗಳಿಗೆ ಬರೆದ ಸದರಿ ಪತ್ರದ ಪ್ರತಿಗಳನ್ನು ಕೆಳಕಂಡ ಅಭ್ಯರ್ಥಿಗೂ ಸಹ ಕಳುಹಿಸಿ, ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಒದಗಿಸಬೇಕಾದ ಅಗತ್ಯ ದಾಖಲೆಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ತಕ್ಷಣವೇ ಒದಗಿಸಿ, ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಈ ಕಛೇರಿಗೆ ಕಳುಹಿಸುವ ವ್ಯವಸ್ಥೆ ಮಾಡುವಂತೆ ಈ ಅಭ್ಯರ್ಥಿಗೆ ಸೂಚಿಸಲಾಯಿತು.

ಮೇಲ್ಕಂಡ ನಿರ್ದೇಶನಕ್ಕೆ ಉತ್ತರವಾಗಿ ಈ ಅಭ್ಯರ್ಥಿಯ ಪರವಾಗಿ ಶ್ರೀ ಬಿ.ಟಿ. ಕಟ್ಟೀಮನಿ ಚಡಚಣ ತಾಃ ಇಂಡಿ ಎಂಬುವರು ದಿನಾಂಕಃ 5-9-2004 ರಂದು ಈ ಕಛೇರಿಗೆ ಸಲ್ಲಿಸಿದ ಲಿಖಿತ ಮನವಿಯಲ್ಲಿ ಈ ಅಭ್ಯರ್ಥಿಯು ಈಗಾಗಲೇ ಸರ್ಕಾರಿ ಹುದ್ದೆಯಲ್ಲಿ ಸೇರ್ಪಡೆಯಾಗಿದ್ದು ಸದರಿಯವರನ್ನು ಬೆರಳಚ್ಚುಗಾರರೆಂದು ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿರುವುದನ್ನು ರದ್ದು ಪಡಿಸಬೇಕೆಂದು ಕೋರಿಕೊಂಡ ಮೇರೆ ಸದರಿ ಶ್ರೀ ಬಿ.ಟಿ. ಕಟ್ಟೀಮನಿ ಇವರ ಅಭಿಪ್ರಾಯಕ್ಕೆ ಈ ಅಭ್ಯರ್ಥಿಯ ಒಪ್ಪಿಗೆ ಇದೆಯೋ ಅಥವಾ ಇಲ್ಲವೋ ಎಂಬುದು ತಿಳಿಯದ ಕಾರಣ ಈ ವಿಷಯದ ಬಗ್ಗೆ ಸದರಿ ಶ್ರೀಮತಿ ಸುವರ್ಣಾ ತೆಲಗಾಂವ ಇವರ ಸ್ಪಷ್ಟ ಮತ್ತು ನಿರ್ದಿಷ್ಟ ಅಭಿಪ್ರಾಯವೇನು? ಎಂಬುದನ್ನು ಪಡೆಯುವುದು ಅಗತ್ಯವೆಂದು ಮನಗಂಡು ಸದರಿ ಅಭ್ಯರ್ಥಿಯು ಸಿರಗುಪ್ಪಾ ತಾಲ್ಲೂಕ್, ಗ್ರಾಮ ಲೆಕ್ಕಾಧಿಕಾರಿಯಾಗಿ ಇರುವರೆಂದು ಜಿಲ್ಲಾ ನೋಂದಣಾಧಿಕಾರಿ, ಬಿಜಾಪುರ ಇವರು ಪತ್ರ ಸಂಖ್ಯೆಃ ಜಿನೋಕ/ನೋಟೀಸ್/273/01-02 ದಿನಾಂಕಃ 14-10-2004 ರನ್ವಯ ಈ ಕಛೇರಿಗೆ ವರದಿ ಮಾಡಿದ್ದರಿಂದ ಸದರಿ ಅಭ್ಯರ್ಥಿಗೆ ದಿನಾಂಕಃ 25-10-2004 ರನ್ವಯ ಉಲ್ಲೇಖ (8) ರ ಈ ಕಛೇರಿಯ ಅಂತಿಮ ನೋಟೀಸನ್ನು ತಹಶೀಲ್ದಾರ್ ಸಿರಗುಪ್ಪಾ ಇವರ ಮೂಲಕ ದಿನಾಂಕಃ 30-10-2004 ರಂದು ಜಾರಿ ಮಾಡಿಸಿ, ಶ್ರೀ ಬಿ.ಟಿ. ಕಟ್ಟೀಮನಿ ಚಡಚಣ ಇವರ ಮೇಲ್ಕಂಡ ಅಭಿಪ್ರಾಯಕ್ಕೆ ನಿಮ್ಮ ಸ್ಪಷ್ಟ ಅಭಿಪ್ರಾಯವೇನು? ಎಂಬ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸುವಂತೆ ಸದರಿ ಅಭ್ಯರ್ಥಿಗೆ ನಿರ್ದೇಶನ ನೀಡಿದ್ದರ ಮೇರೆ ಸದರಿ ಉಲ್ಲೇಖ (8) ರ ನೋಟೀಸ್ ಅನ್ನು ದಿನಾಂಕಃ 30-10-2004 ರಂದು ಖುದ್ದಾಗಿ ಸ್ವೀಕರಿಸಿದ ಈ ಅಭ್ಯರ್ಥಿಯು ಇದಕ್ಕೆ ಉತ್ತರವಾಗಿ ದಿನಾಂಕಃ 4-12-04 ರಂದು ಉಲ್ಲೇಖ (9) ರನ್ವಯ ಈ ಕಛೇರಿಗೆ ಮನವಿಯೊಂದನ್ನು ಸಲ್ಲಿಸಿ ಸದರಿ ಮನವಿಯಲ್ಲಿ ತಾವು ಈಗಾಗಲೇ ಬಳ್ಳಾರಿ ಜಿಲ್ಲೆ ಸಿರಗುಪ್ಪಾ ತಾಲ್ಲೂಕಿನ ಕಂದಾಯ ವ್ಯಾಪ್ತಿಯಲ್ಲಿ ಗ್ರಾಮಲೆಕ್ಕಾಧಿಕಾರಿಯಾಗಿ ಒಂದು ವರ್ಷದಿಂದ ಸೇವೆ ಸಲ್ಲಿಸುತ್ತಿದ್ದು ಈ ಕೆಲಸ ತಮಗೆ ತೃಪ್ತಿದಾಯಕವಾಗಿದೆ ಆದ್ದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರ ಹೆಚ್ಚುವರಿ ಪಟ್ಟಿಯಲ್ಲಿನ ತಮ್ಮ ಆಯ್ಕೆಯನ್ನು ರದ್ದುಪಡಿಸಬೇಕೆಂದು ಹಾಗೂ ತಮ್ಮ ಬದಲಿಗೆ ಬೇರೆ ಅಭ್ಯರ್ಥಿಯನ್ನು ಆಯ್ಕೆ ಮಾಡಿಕೊಳ್ಳಲು ತಮ್ಮ ಅಭ್ಯಂತರವೇನೂ ಇಲ್ಲವೆಂದು ತಮ್ಮ ಸದರಿ ಮನವಿಯಲ್ಲಿ ಮನವಿ ಮಾಡಿರುತ್ತಾರೆ.

ಮೇಲ್ಕಂಡ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕಃ 9-1-2004 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಪರಿಶಿಷ್ಟ ಜಾತಿಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಅಭ್ಯರ್ಥಿಯಾದ ಶ್ರೀಮತಿ ಸುವರ್ಣಾ ತೆಲಗಾಂವ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸುವುದು ಉಚಿತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:EST-1-274/01-02, ದಿನಾಂಕ: 16ನೇ ನವೆಂಬರ್, 2005**

ಆದ್ದರಿಂದ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (6) ರನ್ವಯ ದಿನಾಂಕಃ9-1-2004 ರಂದು ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಕೆಳಕಂಡ ಪರಿಶಿಷ್ಟ ಜಾತಿ ಅಭ್ಯರ್ಥಿಯಾದ ಶ್ರೀಮತಿ ಸುವರ್ಣಾ ತೆಲಗಾಂವ ಇವರ ತಾತ್ಕಾಲಿಕ ಆಯ್ಕೆಯನ್ನು ಅವರ ಕೋರಿಕೆಯಂತೆ ಹೆಚ್ಚುವರಿ ಪಟ್ಟಿಯಿಂದ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಮೂಲಕ ರದ್ದುಪಡಿಸಲಾಗಿದೆ.

ಕೆಳಕಂಡ ಪರಿಶಿಷ್ಟ ಜಾತಿ ಅಭ್ಯರ್ಥಿಯಾದ ಶ್ರೀಮತಿ ಸುವರ್ಣಾ ತೆಲಗಾಂವ ಇವರು ಇನ್ನು ಮುಂದೆ ಈ ಇಲಾಖೆಯ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ರೀತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಮತ್ತು ಯಾವುದೇ ರೀತಿಯ ಹಕ್ಕನ್ನು ಸಹ ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮದಿನಾಂಕ | 21-9-2002 ರ ಅಂತ್ಯಕ್ಕೆ ಅಭ್ಯರ್ಥಿ ವಯಸ್ಸು ವ- ತಿಂ- ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಷರಾ |
|---|---|---|---|---|---|
| 1. | ಸುವರ್ಣಾ ತೆಲಗಾಂವ D/o ನಾಗಪ್ಪ ಲಕ್ಷ್ಮಣ ತೆಲಗಾಂವ್ C/o B.T. ಕಟ್ಟೀಮನಿ ಪೋಸ್ಟ್ ಚಡಚಣ ತಾಲ್ಲೂಕ್ ಇಂಡಿ ಜಿಲ್ಲೆಃ ಬಿಜಾಪುರ (ತಾತ್ಕಾಲಿಕ ಆಯ್ಕೆ ಹೆಚ್ಚುವರಿ ಪಟ್ಟಿ ಕ್ರಮ ಸಂಖ್ಯೆ 4) | 01-06-1973 | 29-03-20 | S.S.L.C: 68.833 ಕನ್ನಡ ಬೆರಳಚ್ಚು ಸೀನಿಯರ್ 59.000 ಒಟ್ಟು 127.833 ಸರಾಸರಿ ಶೇಕಡಾವಾರು ಅಂಕಗಳು 63.917 | ಪರಿಶಿಷ್ಟ ಜಾತಿಯ ಮಹಿಳಾ ಅಭ್ಯರ್ಥಿಯಾಗಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿನ ಇವರ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸಿದೆ. |

**ಸಿ. ಕೃಷ್ಣಪ್ಪ**

ಪಿ.ಆರ್.636

ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ

ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು, ಕಾವೇರಿ ಭವನ,**

**7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ:ಇಎಸ್‌ಟಿ 1-274:2001-02, ದಿನಾಂಕ:19ನೇ ನವೆಂಬರ್, 2005**

**ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆ ಪಟ್ಟಿ**

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಎರಡನೇ ಅಧಿಸೂಚನೆಗೆ ಸಂಬಂಧಿಸಿದಂತೆ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸುವ ಕುರಿತು.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿ.ಪಿ.ಎ.ಆರ್.13 ಎಸ್.ಬಿ.ಸಿ. 2001 ದಿನಾಂಕ: 21-11-2001 ರನ್ವಯ ಪ್ರಕಟಿಸಿರುವ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ: ಸಿ.ಅ.ಸು.ಇ. 6 ಸೆನೆನಿ 2001, ದಿನಾಂಕ: 13-2-2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್.ಡಬ್ಲ್ಯುಡಿ. 132 ಎಸ್‌ಎಡಿ 97, ದಿನಾಂಕ: 8-2-2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್.ಬಿ.ಸಿ. 2001 ದಿನಾಂಕ: 1-6-2002.(ದಿನಾಂಕ:14-6-2002ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ).
5. ಈ ಕಛೇರಿಯ ಸಮ ಸಂಖ್ಯೆ ಎರಡನೇ ಅಧಿಸೂಚನೆ ದಿನಾಂಕ: 17-08-2002 (ದಿನಾಂಕ: 22-08-2002 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ).
6. ಈ ಕಛೇರಿಯ ಸಮಸಂಖ್ಯೆ ಎರಡನೇ ಅಧಿಸೂಚನೆಗೆ ಸೇರಿದ ಬೆರಳಚ್ಚುಗಾರರ ಎರಡನೇ ತಾತ್ಕಾಲಿಕ ಆಯ್ಕೆಪಟ್ಟಿ ದಿನಾಂಕ: 09-01-2004.
7. ಸರ್ಕಾರಕ್ಕೆ ಬರೆದ ಈ ಕಛೇರಿಯ ಸಮಸಂಖ್ಯೆ ಪತ್ರ ದಿನಾಂಕ: 26-09-2002.
8. ಸರ್ಕಾರದ ಪತ್ರ ಸಂಖ್ಯೆ: ಕಂಇ 120 ಮುನೋಸ 2001 ದಿನಾಂಕ: 1-1-2004.
9. ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 16-11-2005.
10. ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 16-11-2005.
11. ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 16-11-2005.
12. ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 16-11-2005.
13. ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 16-11-2005.

**ಪ್ರಸ್ತಾವನೆ:**

ಈ ಇಲಾಖೆಯ ಆಯಾಯ ಜಿಲ್ಲಾ ನೋಂದಣಾಧಿಕಾರಿಗಳಿಂದ ಕೆಳಕಂಡ ಜಿಲ್ಲೆಗಳಲ್ಲಿ ಗುರುತಿಸಲ್ಪಟ್ಟು ಉಲ್ಲೇಖ (1) (2) ಮತ್ತು (4) ರನ್ವಯ ಪ್ರಕಟಿಸಿರುವ ಬ್ಯಾಕ್‌ಲಾಗ್ ನಿಯಮಗಳ ನಿರ್ದೇಶನದಂತೆ ಕೆಳಕಂಡಂತೆ ವರ್ಗೀಕರಿಸಿದ ಪರಿಶಿಷ್ಟ ಜಾತಿಯ ಆರು ಮತ್ತು ಪರಿಶಿಷ್ಟ ಪಂಗಡದ ಒಂದು, ಒಟ್ಟಾರೆ ಏಳು ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳ ನೇರ ನೇಮಕಾತಿಗಾಗಿ ಉಲ್ಲೇಖ (5) ರ ಈ ಕಛೇರಿಯ ಎರಡನೇ ಅಧಿಸೂಚನೆಯಲ್ಲಿ ಅರ್ಜಿಗಳನ್ನು ಕರೆಯಲಾಗಿತ್ತು.

**ಆಯಾಯ ಜಿಲ್ಲೆಯ ಜಿಲ್ಲಾ ನೋಂದಣಾಧಿಕಾರಿಗಳಿಂದ ಆಯಾಯ ಜಿಲ್ಲೆಗಳಲ್ಲಿ ಗುರುತಿಸಲ್ಪಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳ ವಿವರಗಳು ಕೆಳಗಿನಂತೆ ಇರುತ್ತವೆ.**

| ಕ್ರ.ಸಂ. | ಜಿಲ್ಲೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಒಟ್ಟು |
|---|---|---|---|---|
| 1 | ಬೆಳಗಾಂ | ಇಲ್ಲ | 1 | 1 |
| 2 | ಚಿತ್ರದುರ್ಗ | 1 | ಇಲ್ಲ | 1 |
| 3 | ಗದಗ | 1 | ಇಲ್ಲ | 1 |
| 4 | ಗುಲ್ಬರ್ಗಾ | 1 | ಇಲ್ಲ | 1 |
| 5 | ಹಾಸನ | 1 | ಇಲ್ಲ | 1 |
| 6 | ಕೊಡಗು | 1 | ಇಲ್ಲ | 1 |
| 7 | ತುಮಕೂರು | 1 | ಇಲ್ಲ | 1 |
| | **ಒಟ್ಟು** | **6** | **1** | **7** |

ಮೇಲ್ಕಂಡ ಈ ಹುದ್ದೆಗಳನ್ನು ಉಲ್ಲೇಖ (2) ರ ಸರ್ಕಾರದ ಆದೇಶದನ್ವಯ ನೇರ ನೇಮಕಾತಿಗಾಗಿ ಕೆಳಕಂಡಂತೆ ವರ್ಗೀಕರಿಸಲಾಗಿದೆ.

| ಕ್ರ.ಸಂ. | ಮೀಸಲಾತಿ ವರ್ಗೀಕರಣ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|---|
| 1 | ಸಾಮಾನ್ಯ ಅರ್ಹತಾ ಅಭ್ಯರ್ಥಿ | 2 | ಇಲ್ಲ |
| 2. | ಮಹಿಳಾ ಅಭ್ಯರ್ಥಿ | 2 | 1 |
| 3. | ಗ್ರಾಮೀಣ ಅಭ್ಯರ್ಥಿ | 2 | ಇಲ್ಲ |
| | **ಒಟ್ಟು** | **6** | **1** |

ಆದರೆ, ಮೇಲ್ಕಂಡ ಏಳು ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬಲು ಮೇಲ್ಕಂಡ ಜಿಲ್ಲೆಗಳಲ್ಲಿ ಹುದ್ದೆಗಳು ಖಾಲಿ ಇಲ್ಲದ್ದರಿಂದ ಈ ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜನೆ ಮಾಡುವಂತೆ ದಿನಾಂಕ:26-9-2002 ರಂದು ಉಲ್ಲೇಖ (7) ರನ್ವಯ ಸರ್ಕಾರಕ್ಕೆ ಪತ್ರ ಬರೆಯಲಾಯಿತು.

ಈ ಬಗ್ಗೆ ಸರ್ಕಾರದವರು ಉಲ್ಲೇಖ (8) ರ ಅವರ ದಿನಾಂಕ:01-01-2004 ರ ಪತ್ರದಲ್ಲಿ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬಲು ತಾತ್ಕಾಲಿಕ ಹುದ್ದೆಗಳನ್ನು ಸೃಷ್ಟಿಸಲು ಸರ್ಕಾರದ ಮಂಜೂರಾತಿ ಕೋರಿರುವುದನ್ನು ಪರಿಶೀಲಿಸಲಾಯಿತೆಂದು ಹಾಗೂ ಕಂದಾಯ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಬ್ಯಾಕ್‌ಲಾಗ್ ಹುದ್ದೆಗಳನ್ನು ತುಂಬಲು ಹುದ್ದೆಗಳನ್ನು ಸೃಷ್ಟಿಸುವ ಕುರಿತು ಸಚಿವ ಸಂಪುಟದ ಉಪ ಸಮಿತಿಯು ದಿನಾಂಕ: 15-10-2003 ರಂದು ತೆಗೆದುಕೊಂಡ ತೀರ್ಮಾನದ ಪ್ರಕಾರ, ಈ ಬ್ಯಾಕ್‌ಲಾಗ್ ಹುದ್ದೆಗಳನ್ನು ಮುಂದೆ ಖಾಲಿ ಹುದ್ದೆಗಳು ಲಭ್ಯವಾದಾಗ ಅವುಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಅಭ್ಯರ್ಥಿಗಳಿಂದ ತುಂಬಬೇಕೆಂದು ನಿರ್ದೇಶನ ನೀಡಿದ್ದರಿಂದ ಈ ಇಲಾಖೆಯಲ್ಲಿ ಮೇಲ್ಕಂಡ ವರ್ಗೀಕರಣದ ಪ್ರಕಾರ ಗುರುತಿಸಲ್ಪಟ್ಟ ಏಳು ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳಿಗೂ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸುವುದು ಸೂಕ್ತವೆಂದು ಮನಗಂಡು ದಿನಾಂಕ:17-08-2002 ರ ಉಲ್ಲೇಖ (5) ರ ಎರಡನೇ ಅಧಿಸೂಚನೆಗೆ ಅನುಗುಣವಾಗಿ ಬಂದ ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ, ಅವುಗಳ ಪೈಕಿ ಉಲ್ಲೇಖ (1) ರ ನಿಯಮಗಳಲ್ಲಿನ ನಿರ್ದೇಶನದಂತೆ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಅಭ್ಯರ್ಥಿಗಳಲ್ಲಿ ಬೆರಳಚ್ಚುಗಾರರ ಹುದ್ದೆಗೆ ನಿಗಧಿಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದವರನ್ನು Merit ಆಧಾರದ ಮೇಲೆ ಮೇಲ್ಕಂಡಂತೆ ವರ್ಗೀಕರಿಸಿದ ಮೀಸಲಾತಿಗೆ ಅನುಗುಣವಾಗಿ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆ ಮಾಡಿ ಉಲ್ಲೇಖ (4) ರ ನಿರ್ದೇಶನದಂತೆ 1:1 ರ ಪ್ರಮಾಣದಲ್ಲಿ ತಾತ್ಕಾಲಿಕ ಆಯ್ಕೆಯ ಮುಖ್ಯಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಉಲ್ಲೇಖ (6) ರನ್ವಯ ದಿನಾಂಕ: 09-01-2004 ರಂದು ಪ್ರಕಟಿಸಿ, ಸದರಿ ಆಯ್ಕೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು 30 ದಿನಗಳೊಳಗೆ ಲಿಖಿತ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಯಿತು.

ಈ ವಿಚಾರದಲ್ಲಿ ಈವರೆವಿಗೂ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ ಹಾಗೂ ಉಲ್ಲೇಖ (6) ರನ್ವಯ ಪ್ರಕಟಿಸಿದ ಎರಡನೇ ತಾತ್ಕಾಲಿಕ ಆಯ್ಕೆ ಪಟ್ಟಿಯ ಮುಖ್ಯಪಟ್ಟಿ ಮತ್ತು ಹೆಚ್ಚುವರಿ ಪಟ್ಟಿಯಲ್ಲಿರುವ ಎಲ್ಲಾ ಅಭ್ಯರ್ಥಿಗಳ ಪೂರ್ವ ಚರಿತ್ರಾ ವರದಿಗಳು ಪೊಲೀಸ್ ಇಲಾಖೆಯಿಂದ ಬಂದಿದ್ದು ಅವುಗಳಲ್ಲಿ ಯಾವುದೇ ಪ್ರತಿಕೂಲ ಷರಾಗಳು ಇರುವುದಿಲ್ಲ ಮತ್ತು ಕೆಳಕಂಡ ಅಭ್ಯರ್ಥಿಗಳನ್ನು ಹೊರತುಪಡಿಸಿ ಸದರಿ ಎರಡನೇ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿ ಮತ್ತು ಹೆಚ್ಚುವರಿ ಪಟ್ಟಿಯಲ್ಲಿರುವ ಉಳಿದ ಎಲ್ಲಾ ಅಭ್ಯರ್ಥಿಗಳ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಬಂದಿರುತ್ತವೆ.

(1) ಸುಭಾಷ್ ಚಂದ್ರ (SC) (2) ಜಯಲಕ್ಷ್ಮಿ (SC) (3) ಕೆ. ಮರಿಸ್ವಾಮಿ (SC) (4) ಸುವರ್ಣಾ ತೆಲಗಾಂವ (SC) ಮತ್ತು (5) ಇಂದಿರಮ್ಮ (ST)

ಮೇಲ್ಕಂಡ ಅಭ್ಯರ್ಥಿಗಳ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳು ಜಿಲ್ಲಾಧಿಕಾರಿಗಳಿಂದ ಬಾರದೇ ಇದ್ದುದರಿಂದ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ದಿನಾಂಕ: 19-01-2004 ರಂದು ಪತ್ರ ಬರೆದು ಇವರುಗಳ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳನ್ನು ತಕ್ಷಣವೇ ಕಳುಹಿಸುವಂತೆ ಕೋರಲಾಯಿತು. ಹಾಗೂ ತದನಂತರ ದಿನಾಂಕ:29-04-04 ಮತ್ತು 30-08-04 ರಂದು ನೆನಪೋಲೆ ಸಹ ನೀಡಲಾಯಿತು, ಹಾಗೂ ಜಿಲ್ಲಾಧಿಕಾರಿಗಳಿಗೆ ಬರೆದ ಸದರಿ ಪತ್ರಗಳ ಪ್ರತಿಯನ್ನು ಮೇಲ್ಕಂಡ ಅಭ್ಯರ್ಥಿಗಳಿಗೆ ಕಳುಹಿಸಿ ತಮ್ಮ ತಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಕ್ಕಾಗಿ ಒದಗಿಸಬೇಕಾದ ಅಗತ್ಯ ದಾಖಲೆಗಳನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ತಕ್ಷಣವೇ ಒದಗಿಸಿ ತಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳನ್ನು ತಪ್ಪದೇ ಈ ಕಛೇರಿಗೆ ತಲುಪಿಸುವ ವ್ಯವಸ್ಥೆ ಮಾಡುವಂತೆ ಈ ಅಭ್ಯರ್ಥಿಗಳಿಗೆ ಸೂಚಿಸಲಾಯಿತು.

ಮೇಲ್ಕಂಡ ನಿರ್ದೇಶನಕ್ಕೆ ಉತ್ತರವಾಗಿ ಸುಭಾಷ್ ಚಂದ್ರ ಇವರು ದಿನಾಂಕ:10-9-2004 ರಂದು ಈ ಕಛೇರಿಗೆ ಲಿಖಿತ ಮನವಿಯೊಂದನ್ನು ಸಲ್ಲಿಸಿ ಸದರಿ ಮನವಿಯಲ್ಲಿ ತಾವು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಈಗಾಗಲೇ ಶೀಘ್ರಲಿಪಿಗಾರರೆಂದು ಔಷಧಿ ನಿಯಂತ್ರಣ ಇಲಾಖೆ ಬೆಂಗಳೂರು ಇಲ್ಲಿ ನೇಮಕಾತಿ ಹೊಂದಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಬೆರಳಚ್ಚುಗಾರರಾಗಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇಮಕಾತಿ ಹೊಂದಲು ಇಷ್ಟವಿರುವುದಿಲ್ಲವೆಂದು ಹಾಗೂ ತಮ್ಮ ಆಯ್ಕೆಯನ್ನು ರದ್ದುಪಡಿಸಿ ತಮ್ಮ ಬದಲಿಗೆ ಬೇರೆ ಅಭ್ಯರ್ಥಿಯನ್ನು ಆಯ್ಕೆ ಮಾಡಿಕೊಳ್ಳಬಹುದೆಂದು ಇದಕ್ಕೆ ತಮ್ಮ ತಕರಾರು ಏನೂ ಇರುವುದಿಲ್ಲವೆಂದು ತಮ್ಮ ಸದರಿ ಮನವಿಯಲ್ಲಿ ಮನವಿ ಮಾಡಿರುತ್ತಾರೆ.

ಶ್ರೀಮತಿ H. ಜಯಲಕ್ಷ್ಮಿ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕಳುಹಿಸುವಂತೆ ಮಂಡ್ಯ ಜಿಲ್ಲಾಧಿಕಾರಿಗಳಿಗೆ ದಿನಾಂಕ: 29-4-04 ರಂದು ನೆನಪೋಲೆ ನೀಡಿದ ನಂತರ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಮಂಡ್ಯ ಇವರು ಅವರ ಪತ್ರ ಸಂಖ್ಯೆ: ಜಿಸಕಅ/ಸಿಂಧುತ್ವ/ಸಿಆರ್-198/2003-04 ದಿನಾಂಕ:11-8-2004 ರ ಪತ್ರದ ಮೂಲಕ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಈ ಕಛೇರಿಗೆ ಕಳುಹಿಸುತ್ತಾ, ಈ ಅಭ್ಯರ್ಥಿಯು ಈಗ ಕರ್ನಾಟಕ ಭೂ ಸೇನಾ ನಿಗಮ ನಿಯಮಿತ ಬೆಂಗಳೂರು ಇಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಈಗಾಗಲೇ ಬೆರಳಚ್ಚುಗಾರರೆಂದು ನೇಮಕಾತಿ ಹೊಂದಿ ಕಾರ್ಯ ನಿರ್ವಹಿಸುತ್ತಿರುವರೆಂದು ವರದಿ ಮಾಡಿದ್ದರ ಮೇರೆ, ಸದರಿ ಭೂ ಸೇನಾ ನಿಗಮಕ್ಕೆ ಪತ್ರ ವ್ಯವಹಾರ ಮಾಡಲಾಗಿ, ಈ ಅಭ್ಯರ್ಥಿಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಬೆಂಗಳೂರು ಇಲ್ಲಿ ಬೆರಳಚ್ಚುಗಾರರಾಗಿರುವರೆಂದು ತಿಳಿಸಿದ್ದರ ಮೇರೆ ಸದರಿ ಅಭ್ಯರ್ಥಿಗೆ ದಿನಾಂಕ: 25-10-2004 ರನ್ವಯ ಈ ಕಛೇರಿಯಿಂದ ಅಂತಿಮ ನೋಟೀಸ್ ಅನ್ನು ಜಾರಿ ಮಾಡಿ ಸದರಿ ನೋಟೀಸ್‌ನಲ್ಲಿ, ಈ ಅಭ್ಯರ್ಥಿಯು ಈಗಾಗಲೇ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ಸದರಿ ನಿಗಮದಲ್ಲಿ ಕೆಲಸ ಮಾಡುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆ ಯಲ್ಲಿ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ನೇಮಕ ಹೊಂದಲು ಇಚ್ಛೆ ಇದೆಯೇ? ಅಥವಾ ಇಲ್ಲವೇ? ಎಂಬ ಬಗ್ಗೆ ಲಿಖಿತ ಅಭಿಪ್ರಾಯವನ್ನು ಈ ಕಛೇರಿಗೆ ಸಲ್ಲಿಸುವಂತೆ ನಿರ್ದೇಶಿಸಲಾಯಿತು.

ಈ ಕಛೇರಿಯ ಸಮಸಂಖ್ಯೆ ಸದರಿ ನೋಟೀಸನ್ನು ಖುದ್ದಾಗಿ ದಿನಾಂಕ:20-1-05 ರಂದು ಸ್ವೀಕರಿಸಿದ ಇವರು ದಿನಾಂಕ:20-1-05 ರಂದು ಈ ಕಛೇರಿಗೆ ಸಲ್ಲಿಸಿದ ತಮ್ಮ ಲಿಖಿತ ಮನವಿಯಲ್ಲಿ ತಾವು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಈಗಾಗಲೇ ಬೆಸ್ಕಾಂ ಲಾಜರ್ ರಸ್ತೆ, ಬೆಂಗಳೂರು ಇಲ್ಲಿ ಬೆರಳಚ್ಚುಗಾರರಾಗಿ ಕೆಲಸ ಮಾಡುತ್ತಿರುವುದರಿಂದ ತಮಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬ್ಯಾಕ್‌ಲಾಗ್

ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ನೇಮಕಾತಿ ಹೊಂದಲು ಇಷ್ಟವಿಲ್ಲವೆಂದು ತಿಳಿಸುತ್ತಾ ತಮ್ಮ ಆಯ್ಕೆಯನ್ನು ರದ್ದುಪಡಿಸಿ ಬೇರೆಯವರನ್ನು ಆಯ್ಕೆ ಮಾಡಿಕೊಳ್ಳಬಹುದೆಂದು ಇದಕ್ಕೆ ತಮ್ಮ ತಕರಾರು ಏನೂ ಇರುವುದಿಲ್ಲವೆಂದು ಸದರಿ ಮನವಿಯಲ್ಲಿ ಮನವಿ ಮಾಡಿರುತ್ತಾರೆ.

ಇದೇ ರೀತಿ ಶ್ರೀ ಕೆ. ಮರಿಸ್ವಾಮಿ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕಳುಹಿಸುವಂತೆ ಮಂಡ್ಯ ಜಿಲ್ಲಾಧಿಕಾರಿಗಳಿಗೆ ದಿನಾಂಕ:29-4-04 ರಂದು ನೆನಪೋಲೆ ನೀಡಿದ ನಂತರ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ಮಂಡ್ಯ ಇವರು ಅವರ ಪತ್ರ ಸಂಖ್ಯೆ ಜಿಸಕಅ-ಸಿಂಧುತ್ವ-ಸಿಆರ್-199/2003-04 ದಿನಾಂಕ:16-6-2004 ರ ಪತ್ರದಲ್ಲಿ ಜಾತಿ ಸಿಂಧುತ್ವ ಪ್ರಮಾಣ ಪತ್ರ ನೀಡುವುದಕ್ಕಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳನ್ನು ಸಲ್ಲಿಸುವಂತೆ ಈ ಅಭ್ಯರ್ಥಿಗೆ ದಿನಾಂಕ:10-02-2004, 24-03-04 ಮತ್ತು 11-05-04 ರಂದು ಲಿಖಿತ ಮೂಲಕ ಪತ್ರಗಳನ್ನು ಬರೆಯಲಾಯಿತೆಂದು ವರದಿ ಮಾಡುತ್ತಾ, ಇದಕ್ಕೆ ಉತ್ತರವಾಗಿ ಸದರಿ ಅಭ್ಯರ್ಥಿಯು ದಿನಾಂಕ: 15-06-2004 ರನ್ವಯ ಲಿಖಿತ ಮನವಿ ಸಲ್ಲಿಸಿ ತಮಗೆ ಬೇರೆ ಇಲಾಖೆಯಲ್ಲಿ ಉದ್ಯೋಗ ದೊರಕಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಕೆಲಸಕ್ಕೆ ಸೇರಲು ಇಚ್ಛೆ ಇರುವುದಿಲ್ಲವೆಂದು ಹಾಗೂ ತಮಗೆ ಜಾತಿ ಸಿಂಧುತ್ವ ಪತ್ರದ ಅವಶ್ಯಕತೆ ಇರುವುದಿಲ್ಲವೆಂದು ಸದರಿ ಅಭ್ಯರ್ಥಿಯು ಸದರಿ ಸಮಾಜ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಿರುವ ಮನವಿಯ ಪ್ರತಿಯನ್ನು ಸದರಿ ಮಂಡ್ಯ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಈ ಕಛೇರಿಗೆ ಕಳುಹಿಸುತ್ತಾ ಈ ಕಾರಣದಿಂದ ಈ ಅಭ್ಯರ್ಥಿಗೆ ಜಾತಿ ಸಿಂಧುತ್ವ ಪತ್ರವನ್ನು ನೀಡಲು ಬರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಇದೇ ರೀತಿ ಮೇಲ್ಕಂಡ ಅಭ್ಯರ್ಥಿಗಳ ಪೈಕಿ ಶ್ರೀಮತಿ ಸುವರ್ಣಾ ತೆಲಗಾಂವ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕಳುಹಿಸುವಂತೆ ಬಿಜಾಪುರ ಜಿಲ್ಲಾಧಿಕಾರಿಗಳಿಗೆ ದಿನಾಂಕ:19-1-2004 ರಂದು ಪತ್ರ ಬರೆದು, ದಿನಾಂಕ:29-4-2004 ಮತ್ತು 30-8-2004 ರಂದು ನೆನಪೋಲೆ ನೀಡಿ, ಸದರಿ ಪತ್ರದ ಪ್ರತಿಗಳನ್ನು ಈ ಅಭ್ಯರ್ಥಿಗೂ ಸಹ ಕಳುಹಿಸಿ ನಿಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಈ ಕಛೇರಿಗೆ ಕಳುಹಿಸುವ ವ್ಯವಸ್ಥೆ ಮಾಡುವಂತೆ ಈ ಅಭ್ಯರ್ಥಿಗೆ ಸೂಚಿಸಿದ್ದರ ಮೇರೆ, ಮೇಲ್ಕಂಡ ನಿರ್ದೇಶನಕ್ಕೆ ಉತ್ತರವಾಗಿ ಈ ಅಭ್ಯರ್ಥಿಯ ಪರವಾಗಿ ಶ್ರೀ ಬಿ.ಟಿ. ಕಟ್ಟೀಮನಿ ಚಡಚಣ ತಾ:ಇಂಡಿ ಎಂಬುವರು ದಿನಾಂಕ:5-9-2004 ರಂದು ಈ ಕಛೇರಿಗೆ ಸಲ್ಲಿಸಿದ ಲಿಖಿತ ಮನವಿಯಲ್ಲಿ ಈ ಅಭ್ಯರ್ಥಿಯು ಈಗಾಗಲೇ ಸರ್ಕಾರಿ ಹುದ್ದೆಯಲ್ಲಿ ಸೇರ್ಪಡೆಯಾಗಿದ್ದು ಸದರಿಯವರನ್ನು ಬೆರಳಚ್ಚುಗಾರರೆಂದು ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿರುವುದನ್ನು ರದ್ದು ಪಡಿಸಬೇಕೆಂದು ಕೋರಿಕೊಂಡ ಮೇರೆ ಸದರಿ ಶ್ರೀ ಬಿ.ಟಿ. ಕಟ್ಟೀಮನಿ ಇವರ ಅಭಿಪ್ರಾಯಕ್ಕೆ ಈ ಅಭ್ಯರ್ಥಿಯ ಒಪ್ಪಿಗೆ ಇದೆಯೋ ಅಥವಾ ಇಲ್ಲವೋ ಎಂಬುದು ತಿಳಿಯದ ಕಾರಣ ಈ ವಿಷಯದ ಬಗ್ಗೆ ಸದರಿ ಶ್ರೀಮತಿ ಸುವರ್ಣಾ ತೆಲಗಾಂವ ಇವರ ಸ್ಪಷ್ಟ ಮತ್ತು ನಿರ್ದಿಷ್ಟ ಅಭಿಪ್ರಾಯವೇನು? ಎಂಬುದನ್ನು ಪಡೆಯುವುದು ಅಗತ್ಯವೆಂದು ಮನಗಂಡು ಸದರಿ ಅಭ್ಯರ್ಥಿಯು ಸಿರಗುಪ್ಪಾ ತಾಲ್ಲೂಕ್, ಗ್ರಾಮ ಲೆಕ್ಕಾಧಿಕಾರಿಯಾಗಿ ಇರುವರೆಂದು ಜಿಲ್ಲಾ ನೋಂದಣಾಧಿಕಾರಿ, ಬಿಜಾಪುರ ಇವರು ಪತ್ರ ಸಂಖ್ಯೆ: ಜಿನೋಕ/ನೋಟೀಸ್/273/01-02 ದಿನಾಂಕ: 14-10-2004 ರನ್ವಯ ಈ ಕಛೇರಿಗೆ ವರದಿ ಮಾಡಿದ್ದರಿಂದ ಸದರಿ ಅಭ್ಯರ್ಥಿಗೆ ದಿನಾಂಕ: 25-10-2004 ರನ್ವಯ ಈ ಕಛೇರಿಯ ಅಂತಿಮ ನೋಟೀಸನ್ನು ತಹಶೀಲ್ದಾರ್ ಸಿರಗುಪ್ಪಾ ಇವರ ಮೂಲಕ ದಿನಾಂಕ:30-10-2004 ರಂದು ಜಾರಿ ಮಾಡಿಸಿ, ಶ್ರೀ ಬಿ.ಟಿ. ಕಟ್ಟೀಮನಿ ಚಡಚಣ ಇವರ ಮೇಲ್ಕಂಡ ಅಭಿಪ್ರಾಯಕ್ಕೆ ನಿಮ್ಮ ಸ್ಪಷ್ಟ ಅಭಿಪ್ರಾಯವೇನು? ಎಂಬ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸುವಂತೆ ಸದರಿ ಅಭ್ಯರ್ಥಿಗೆ ನಿರ್ದೇಶನ ನೀಡಿದ್ದರ ಮೇರೆ ಸದರಿ ನೋಟೀಸ್ ಅನ್ನು ದಿನಾಂಕ:30-10-2004 ರಂದು ಖುದ್ದಾಗಿ ಸ್ವೀಕರಿಸಿದ ಈ ಅಭ್ಯರ್ಥಿಯು ಇದಕ್ಕೆ ಉತ್ತರವಾಗಿ ದಿನಾಂಕ: 04-12-04 ರಂದು ಈ ಕಛೇರಿಗೆ ಮನವಿಯೊಂದನ್ನು ಸಲ್ಲಿಸಿ ಸದರಿ ಮನವಿಯಲ್ಲಿ ತಾವು ಈಗಾಗಲೇ ಬಳ್ಳಾರಿ ಜಿಲ್ಲೆ ಸಿರಗುಪ್ಪಾ ತಾಲ್ಲೂಕಿನ ಕಂದಾಯ ವ್ಯಾಪ್ತಿಯಲ್ಲಿ ಗ್ರಾಮಲೆಕ್ಕಾಧಿಕಾರಿಯಾಗಿ ಒಂದು ವರ್ಷದಿಂದ ಸೇವೆ ಸಲ್ಲಿಸುತ್ತಿದ್ದು ಈ ಕೆಲಸ ತಮಗೆ ತೃಪ್ತಿದಾಯಕವಾಗಿದೆ ಆದ್ದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರ ಹೆಚ್ಚುವರಿ ಪಟ್ಟಿಯಲ್ಲಿನ ತಮ್ಮ ಆಯ್ಕೆಯನ್ನು ರದ್ದುಪಡಿಸಬೇಕೆಂದು ಹಾಗೂ ತಮ್ಮ ಬದಲಿಗೆ ಬೇರೆ ಅಭ್ಯರ್ಥಿಯನ್ನು ಆಯ್ಕೆ ಮಾಡಿಕೊಳ್ಳಲು ತಮ್ಮ ಅಭ್ಯಂತರವೇನೂ ಇಲ್ಲವೆಂದು ತಮ್ಮ ಸದರಿ ಮನವಿಯಲ್ಲಿ ಮನವಿ ಮಾಡಿರುತ್ತಾರೆ.

ಇದೇ ರೀತಿ ಶ್ರೀಮತಿ ಇಂದಿರಮ್ಮ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕಳುಹಿಸುವಂತೆ ತುಮಕೂರು ಜಿಲ್ಲಾಧಿಕಾರಿಗಳಿಗೆ ದಿನಾಂಕ:30-8-04 ರಂದು ನೆನಪೋಲೆ ನೀಡಿದ ನಂತರ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ತುಮಕೂರು ಇವರು ಅವರ ಪತ್ರದ ಸಂಖ್ಯೆ ಜಿಸಕಅ-ಸಿಂಧುತ್ವ-ಸಿಆರ್ 272//2002-03 ದಿನಾಂಕ:08-09-2004 ರ ಪತ್ರದ ಮೂಲಕ ಈ ಅಭ್ಯರ್ಥಿಯ ಜಾತಿ ಸಿಂಧುತ್ವ ಪ್ರಮಾಣ ಪತ್ರದ ನಕಲು ಪ್ರತಿಯನ್ನು ಈ ಕಛೇರಿಗೆ ಕಳುಹಿಸಿರುತ್ತಾರೆ.

ಆದರೆ ಉಲ್ಲೇಖ (6) ರನ್ವಯ ದಿನಾಂಕ: 09-01-2004 ರಂದು ಪ್ರಕಟಿಸಿದ ಎರಡನೇ ತಾತ್ಕಾಲಿಕ ಆಯ್ಕೆ ಪಟ್ಟಿಯ ಮುಖ್ಯ ಪಟ್ಟಿಯಲ್ಲಿ ಈಗ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆಯಾಗಿರುವ ಪರಿಶಿಷ್ಟ ಪಂಗಡದ ಇಂದಿರಮ್ಮ ಇವರು ಮೊದಲ ಬಾರಿಗೆ ದಿನಾಂಕ: 30-01-2002 ರ ಈ ಕಛೇರಿಯ ಮೊದಲನೇ ಸಮಸಂಖ್ಯೆ ಅಧಿಸೂಚನೆ ಮೂಲಕ ಈ ಇಲಾಖೆಯಲ್ಲಿ ಮೊದಲ ಬಾರಿಗೆ ಗುರುತಿಸಲ್ಪಟ್ಟ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗೆ ಅರ್ಜಿ ಸಲ್ಲಿಸಿದ್ದರ ಮೇರೆ ಇವರನ್ನು ಸಾಮಾನ್ಯ ಅರ್ಹತಾ ಅಭ್ಯರ್ಥಿಯ ಮೀಸಲಾತಿ ಅಡಿಯಲ್ಲಿ ಜಿ.ಎಂ. ಅಭ್ಯರ್ಥಿ ಎಂದು ದಿನಾಂಕ: 08-08-2002 ರಂದು ಮೊದಲನೇ ಬಾರಿಗೆ ಪ್ರಕಟಿಸಿದ ಈ ಕಛೇರಿಯ ಸಮಸಂಖ್ಯೆ ತಾತ್ಕಾಲಿಕ ಆಯ್ಕೆಪಟ್ಟಿಯ ಮುಖ್ಯಪಟ್ಟಿಯಲ್ಲಿ ಬೆರಳಚ್ಚುಗಾರರೆಂದು ಆಯ್ಕೆ ಮಾಡಲಾಯಿತು.

ಈಗ ಎರಡನೇ ಬಾರಿಗೆ ಉಲ್ಲೇಖ (6) ರನ್ವಯ ದಿನಾಂಕ:09-01-2004 ರಂದು ಪ್ರಕಟಿಸಿರುವ ಎರಡನೇ ತಾತ್ಕಾಲಿಕ ಆಯ್ಕೆಪಟ್ಟಿಯ ಮುಖ್ಯಪಟ್ಟಿಯಲ್ಲೂ ಸಹ ಸದರಿ ಇಂದಿರಮ್ಮ ಇವರನ್ನು ಮಹಿಳಾ ಅಭ್ಯರ್ಥಿಗೆ ಮೀಸಲಿಟ್ಟ ಹುದ್ದೆಯಲ್ಲಿ ಮಹಿಳಾ ಅಭ್ಯರ್ಥಿಯಾಗಿ ಎರಡನೇ ಬಾರಿಗೆ ಆಯ್ಕೆಮಾಡಿರುವ ಕಾರಣ ಸದರಿಯವರಿಗೆ, ತುಮಕೂರು ಜಿಲ್ಲಾ ನೋಂದಣಾಧಿಕಾರಿಗಳ ಮುಖಾಂತರ ದಿನಾಂಕ:20-09-04 ರ ಈ ಕಛೇರಿಯ ಸಮಸಂಖ್ಯೆ ಅಂತಿಮ ನೋಟೀಸನ್ನು ಜಾರಿ ಮಾಡಿ ಸದರಿ ನೋಟೀಸ್‌ನಲ್ಲಿ ಇವರನ್ನು ಈ ರೀತಿ ಎರಡು ಬಾರಿ ತಾತ್ಕಾಲಿಕವಾಗಿ ಆಯ್ಕೆ ಮಾಡಿರುವ ವಿಷಯವನ್ನು ಪ್ರಸ್ತಾಪಿಸಿ ಈ ಎರಡು ಆಯ್ಕೆಗಳ ಪೈಕಿ ಮೊದಲನೇ ಬಾರಿಗೆ ಬ್ಯಾಕ್‌ಲಾಗ್ ಹುದ್ದೆ ಅಡಿಯಲ್ಲಿ ಬೆರಳಚ್ಚುಗಾರರಾಗಿ ಸಾಮಾನ್ಯ ಅರ್ಹತಾ ಅಭ್ಯರ್ಥಿಗೆ ಮೀಸಲಿಟ್ಟ ಹುದ್ದೆಯಲ್ಲಿ ಆಯ್ಕೆಯಾಗಿರುವ ಪ್ರಕಾರ G.M. ಅಭ್ಯರ್ಥಿಯಾಗಿ ಆಯ್ಕೆ ಹೊಂದಲು ಇಚ್ಛಿಸುವಿರೋ? ಅಥವಾ ಎರಡನೇ ಬಾರಿಗೆ ಮಹಿಳಾ ಅಭ್ಯರ್ಥಿಗೆ ಮೀಸಲಿಟ್ಟ ಹುದ್ದೆಯಲ್ಲಿ ಆಯ್ಕೆಯಾಗಿರುವ ಪ್ರಕಾರ ಮಹಿಳಾ ಅಭ್ಯರ್ಥಿಯಾಗಿ ಆಯ್ಕೆ ಹೊಂದಲು ಇಚ್ಛಿಸುವಿರೋ? ಎಂಬ ಬಗ್ಗೆ ಸದರಿ ನೋಟೀಸ್ ತಲುಪಿದ ದಿನಾಂಕದಿಂದ ಮೂವತ್ತು ದಿನಗಳಲ್ಲಿ ಲಿಖಿತ ಅಭಿಪ್ರಾಯವನ್ನು ಸಲ್ಲಿಸುವಂತೆ ಸದರಿ ಇಂದಿರಮ್ಮ ಇವರಿಗೆ ಸೂಚಿಸಲಾಯಿತು.

ಈ ಕಛೇರಿಯ ಸದರಿ ನೋಟೀಸನ್ನು ದಿನಾಂಕಃ 28-09-2004 ರಂದು ಖುದ್ದಾಗಿ ಸ್ವೀಕರಿಸಿದ ಸದರಿ ಇಂದಿರಮ್ಮ ಇವರು ದಿನಾಂಕಃ 19-7-2005 ರಂದು ಈ ಬಗ್ಗೆ ಈ ಕಛೇರಿಗೆ ಸಲ್ಲಿಸಿದ ತಮ್ಮ ಮನವಿಯಲ್ಲಿ ತಾವು ಈಗಾಗಲೇ ಡಿಪ್ಯೂಟಿ ರಿಜಿಸ್ಟ್ರಾರ್ ಆಫ್ ಕೋ-ಆಪರೇಟೀವ್ ಇಲಾಖೆ ತುಮಕೂರು ಇಲ್ಲಿ ಶೀಘ್ರಲಿಪಿಗಾರರಾಗಿ ಕೆಲಸ ಮಾಡುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರೆಂದು ಮೊದಲನೆ ಬಾರಿಗೆ ಆಯ್ಕೆಯಾಗಿರುವ ಪ್ರಕಾರ ಸಾಮಾನ್ಯ ಅರ್ಹತಾ ಅಭ್ಯರ್ಥಿಯಾಗಿ ನೇಮಕಾತಿ ಹೊಂದಲು ತಮಗೆ ಇಷ್ಟವಿಲ್ಲವೆಂದು ಮತ್ತು ಎರಡನೇ ಬಾರಿಗೆ ಆಯ್ಕೆಯಾಗಿರುವ ಪ್ರಕಾರ ಮಹಿಳಾ ಅಭ್ಯರ್ಥಿಯಾಗಿಯೂ ತಮಗೆ ನೇಮಕಾತಿ ಹೊಂದಲು ಇಷ್ಟವಿಲ್ಲವೆಂದು ಹಾಗೂ ತಮ್ಮ ಈ ಎರಡೂ ರೀತಿಯ ಆಯ್ಕೆಗಳನ್ನು ರದ್ದುಪಡಿಸಿ ಈ ಎರಡೂ ಆಯ್ಕೆಗಳಲ್ಲಿ ತಮ್ಮ ಬದಲಿಗೆ ಬೇರೆ ಅಭ್ಯರ್ಥಿಗಳನ್ನು ಬೆರಳಚ್ಚುಗಾರರಾಗಿ ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಆಯ್ಕೆ ಮಾಡಿಕೊಳ್ಳಲು ತಮ್ಮ ತಕರಾರು ಏನೂ ಇರುವುದಿಲ್ಲವೆಂದು ತಮ್ಮ ಸದರಿ ಮನವಿಯಲ್ಲಿ ಮನವಿ ಮಾಡಿರುತ್ತಾರೆ.

ಈ ರೀತಿ ಮೇಲ್ಕಂಡ ಐದು ಜನ ಅಭ್ಯರ್ಥಿಗಳು ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಬೆರಳಚ್ಚುಗಾರರಾಗಿ ನೇಮಕಾತಿ ಹೊಂದಲು ತಮಗೆ ಇಷ್ಟವಿಲ್ಲವೆಂದು ಹಾಗೂ ತಮ್ಮಗಳ ಆಯ್ಕೆಯನ್ನು ರದ್ದುಪಡಿಸಿ ತಮ್ಮಗಳ ಬದಲಿಗೆ ಬೇರೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿಕೊಳ್ಳಲು ತಮ್ಮಗಳ ತಕರಾರು ಏನು ಇರುವುದಿಲ್ಲವೆಂದು ಮೇಲ್ಕಂಡಂತೆ ಮನವಿ ಸಲ್ಲಿಸಿದ ಕಾರಣ ಇವರುಗಳ ಕೋರಿಕೆಯಂತೆ ಉಲ್ಲೇಖ (6) ರನ್ವಯ ದಿನಾಂಕ:9-1-2004 ರಂದು ಈ ಕಛೇರಿಯಿಂದ ಪ್ರಕಟಿಸಿರುವ ಈ ಇಲಾಖೆಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯ ಎರಡನೇ ತಾತ್ಕಾಲಿಕ ಆಯ್ಕೆಯ ಮುಖ್ಯ ಪಟ್ಟಿಯಿಂದಲೂ ಮತ್ತು ಹೆಚ್ಚುವರಿ ಪಟ್ಟಿಯಿಂದಲೂ ಬೆರಳಚ್ಚುಗಾರರೆಂದು ತಾತ್ಕಾಲಿಕವಾಗಿ ಆಯ್ಕೆಯಾಗಿರುವ ಮೇಲ್ಕಂಡ ಐದು ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಯನ್ನು ಉಲ್ಲೇಖ (9) ರಿಂದ (13) ರ ವರೆಗಿನ ರದ್ದತಿ ಆದೇಶದಲ್ಲಿ ಕ್ರಮವಾಗಿ ರದ್ದುಪಡಿಸಲಾಯಿತು.

ಈ ರೀತಿ ಮೇಲೆ ವಿವರಿಸಿದ ಕಾರಣಗಳಿಂದ ಮೇಲ್ಕಂಡ ಐದು ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆಯನ್ನು ರದ್ದುಪಡಿಸಿದ ಕಾರಣ ಮೇಲ್ಕಂಡ ಅಭ್ಯರ್ಥಿಗಳ ಬದಲಿಗೆ ಉಲ್ಲೇಖ (6) ರನ್ವಯ ದಿನಾಂಕಃ09-01-2004 ರಂದು ಪ್ರಕಟಿಸಿದ ಬೆರಳಚ್ಚುಗಾರರ ಎರಡನೇ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಿಂದ ಅರ್ಹ ಐದು ಅಭ್ಯರ್ಥಿಗಳನ್ನು ನಿಯಮಾನುಸಾರ ಮೀಸಲಾತಿಗೆ ಅನುಗುಣವಾಗಿ ಮುಖ್ಯಪಟ್ಟಿಗೂ ಹಾಗೂ ಇವರುಗಳನ್ನು ಮುಖ್ಯಪಟ್ಟಿಗೆ ಸೇರಿಸಿದ ಕಾರಣ ಅರ್ಹ ಐದು ಅಭ್ಯರ್ಥಿಗಳನ್ನು S.C. ಮತ್ತು S.T. Merit list ನಿಂದ ಹೆಚ್ಚುವರಿ ಪಟ್ಟಿಗೂ ಕಾನೂನು ರೀತ್ಯಾ ಮೀಸಲಾತಿಗೆ ಅನುಗುಣವಾಗಿ ಆಯ್ಕೆ ಮಾಡಿ ಮೇಲೆ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲು ತೀರ್ಮಾನಿಸಿ ಕೆಳಕಂಡಂತೆ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗಿದೆ.

## ಬೆರಳಚ್ಚುಗಾರರ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಪಟ್ಟಿ

## EST-1-274/2001-02, ದಿನಾಂಕ:19ನೇ ನವೆಂಬರ್, 2005

ಆದ್ದರಿಂದ, ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಉಲ್ಲೇಖ (1) ರಲ್ಲಿನ ನಿಯಮಗಳನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಮೇಲ್ಕಂಡಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಆರು ಮತ್ತು ಪರಿಶಿಷ್ಟ ಪಂಗಡದ ಒಂದು ಈ ರೀತಿ ಒಟ್ಟಾರೆ ಏಳು ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಉಲ್ಲೇಖ (1) ರಲ್ಲಿನ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಕೆಳಕಂಡ ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬೆರಳಚ್ಚುಗಾರರೆಂದು ಅಂತಿಮವಾಗಿ ಆಯ್ಕೆ ಮಾಡಿ ಬೆರಳಚ್ಚುಗಾರರ ಅಂತಿಮ ಆಯ್ಕೆಯ ಮುಖ್ಯಪಟ್ಟಿಯನ್ನು ಮತ್ತು ಹೆಚ್ಚುವರಿ ಪಟ್ಟಿಯನ್ನು ಅಭ್ಯರ್ಥಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ.

| ಬ್ಯಾಕ್‌ಲಾಗ್ ಬೆರಳಚ್ಚುಗಾರರ ಮುಖ್ಯಪಟ್ಟಿ (Main list) ಪರಿಶಿಷ್ಟ ಜಾತಿ (S.C.) | | | | | | |
|---|---|---|---|---|---|---|
| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | **ಜನ್ಮ ದಿನಾಂಕ** | 21-09-2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ - ತಿಂ - ದಿ | ವಿದ್ಯಾರ್ಹತೆ ಮತ್ತು ಶೇಕಡವಾರು ಅಂಕಗಳು | **ಸರಾಸರಿ ಶೇಕಡಾವಾರು ಅಂಕಗಳು** | ಯಾವ ಮೀಸಲಾತಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ಆಯ್ಕೆ ಮಾಡಲಾಗಿದೆಯೋ ಅದರ ವಿವರ |
| 1 | 2 | **3** | 4 | 5 | **6** | 7 |
| 1 | ದಿಲೀಪ್ ಶೇರ್‌ಖಾನೆ S/o. ಬಸವರಾಜ ರಾಮಪ್ಪ ಶೇರ್‌ಖಾನೆ ಮುಃಪೋಃ ಯಾದವಾಡ ಗೋಕಾಕ ತಾಲ್ಲೂಕು ಜಿಃಬೆಳಗಾಂ-591136 | 15-08-1970 | 32-01-06 | (i) S.S.L.Cಃ 59.666<br>(ii) ಕನ್ನಡ ಬೆರಳಚ್ಚು ಸೀನಿಯರ್ : 81.500<br>ಒಟ್ಟು : 141.166 | 70.583 | ಪರಿಶಿಷ್ಟ ಜಾತಿ<br>ಸಾಮಾನ್ಯ ಅರ್ಹತೆ ಅಭ್ಯರ್ಥಿ-1 ಮುಖ್ಯಪಟ್ಟಿ |

| 1 | 2 | 3 | 4 | 5 | 6 | 7 |
|---|---|---|---|---|---|---|
| 2 | ಜಯಪುತ್ರ ರಾಜೋಳ್ಕರ್ S/o. ಅರ್ಜುನ್, ಮುಃ ಜಂಬಗಾ (ಬಿ) ಪೋಸ್ಟ್ಃ ಅಷ್ಟಗಾ ತಾಃಜಿಲ್ಲೆಃ ಗುಲ್ಬರ್ಗಾ - 585104. | 10-06-1972 | 30-03-11 | (i) S.S.L.Cಃ 43.000<br>(ii) ಕನ್ನಡ ಬೆರಳಚ್ಚು ಸೀನಿಯರ್ ಃ 88.500<br>ಒಟ್ಟು ಃ 131.500 | 65.750 | ಪರಿಶಿಷ್ಟ ಜಾತಿ<br>ಸಾಮಾನ್ಯ ಅರ್ಹತೆ ಅಭ್ಯರ್ಥಿ-2 ಮುಖ್ಯಪಟ್ಟಿ |
| 3 | ರೇಣುಕಾವಗ್ಗರ್ D/o. ಸಂಗಪ್ಪ ವಗ್ಗರ್ ಮುಃಪೋಃ ದೇವರ ಹಿಪ್ಪರಗಿ ಸಿಂಧಗಿ ತಾಲ್ಲೂಕು ಜಿಲ್ಲೆಃ ಬಿಜಾಪುರ | 22-05-1964 | 38-03-29 | (i) S.S.L.Cಃ 51.000<br>(ii) ಕನ್ನಡ ಬೆರಳಚ್ಚು ಸೀನಿಯರ್ ಃ 80.000<br>ಒಟ್ಟು ಃ 131.000 | 65.500 | ಪರಿಶಿಷ್ಟ ಜಾತಿ<br>ಮಹಿಳಾ ಅಭ್ಯರ್ಥಿ-1 ಮುಖ್ಯಪಟ್ಟಿ |
| 4 | ಜಗದೇವ S/o. ಸಂಬಣ್ಣ ಜೀವಣಗಿ ಮುಃಪೋಃ ಜೀವಣಗಿ ತಾಃ ಜಿಲ್ಲೆಃ ಗುಲ್ಬರ್ಗಾ-585313 | 01-10-1971 | 30-11-20 | (i) S.S.L.Cಃ 46.166<br>(ii) ಕನ್ನಡ ಬೆರಳಚ್ಚು ಸೀನಿಯರ್ ಃ 84.000<br>ಒಟ್ಟು ಃ 130.166 | 65.083 | ಪರಿಶಿಷ್ಟ ಜಾತಿ<br>ಗ್ರಾಮೀಣ ಅಭ್ಯರ್ಥಿ-1 ಮುಖ್ಯಪಟ್ಟಿ |
| 5 | ಭಾಗ್ಯ ಎ.ಎನ್. W/o. ಮಲ್ಲಿಕಾರ್ಜುನಯ್ಯ ಎನ್.ಆರ್. ಕಾಲೋನಿ, 4 ನೇ ಮುಖ್ಯರಸ್ತೆ, ಕೋತಿ ತೋಪು, ತುಮಕೂರು ಟೌನ್. | 20-05-1973 | 29-04-01 | (i) S.S.L.Cಃ 47.333<br>(ii) ಕನ್ನಡ ಬೆರಳಚ್ಚು ಸೀನಿಯರ್ ಃ 80.500<br>ಒಟ್ಟು ಃ 127.833 | 63.917 | ಪರಿಶಿಷ್ಟ ಜಾತಿ<br>ಮಹಿಳಾ ಅಭ್ಯರ್ಥಿ-2 ಮುಖ್ಯಪಟ್ಟಿ |
| 6 | ಮಲ್ಲಪ್ಪ ಹುಕ್ಕೇರಿ S/o. ಶಿವಪುತ್ರ ಮುಃ ಗವನಾಳ ಪೋಃ ಕೆಮತನೂರ ತಾಃ ಹುಕ್ಕೇರಿ ಜಿಲ್ಲೆಃ ಬೆಳಗಾಂ | 22-07-1971 | 31-01-29 | (i) S.S.L.Cಃ 58.000<br>(ii) ಕನ್ನಡ ಬೆರಳಚ್ಚು ಸೀನಿಯರ್ ಃ 69.500<br>ಒಟ್ಟು ಃ 127.500 | 63.750 | ಪರಿಶಿಷ್ಟ ಜಾತಿ<br>ಗ್ರಾಮೀಣ ಅಭ್ಯರ್ಥಿ-2 ಮುಖ್ಯಪಟ್ಟಿ |
| **ಬ್ಯಾಕ್‌ಲಾಗ್ ಬೆರಳಚ್ಚುಗಾರರ ಹೆಚ್ಚುವರಿ ಪಟ್ಟಿ (Additional list) ಪರಿಶಿಷ್ಟ ಜಾತಿ (S.C.)** | | | | | | |
| 1 | ಯಶವಂತ ಪಿ S/o. ಚಂದು ಬೆರಳಚ್ಚುಗಾರ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಬೀದರ್-585401. | 22-07-1966 | 36-01-29 | (i) S.S.L.Cಃ 46.500<br>(ii) ಕನ್ನಡ ಬೆರಳಚ್ಚು ಸೀನಿಯರ್ ಃ 81.500<br>ಒಟ್ಟು ಃ 128.000 | 64.000 | ಪರಿಶಿಷ್ಟ ಜಾತಿ<br>ಸಾಮಾನ್ಯ ಅರ್ಹತೆ ಅಭ್ಯರ್ಥಿ-1 ಹೆಚ್ಚುವರಿ ಪಟ್ಟಿ |
| 2 | ಬಾಬು ಕೆ. S/o V. ಕೃಷ್ಣಪ್ಪ ನಂ. 22/1, ಸಿ-ಕ್ರಾಸ್, ವಿನಾಯಕ ನಗರ, ಆಡುಗೋಡಿ ಅಂಚೆ ಬೆಂಗಳೂರು-560030 | 31-01-1973 | 29-07-20 | (i) S.S.L.Cಃ 52.000<br>(ii) ಕನ್ನಡ ಬೆರಳಚ್ಚು ಸೀನಿಯರ್ ಃ 75.500<br>ಒಟ್ಟು ಃ 127.500 | 63.750 | ಪರಿಶಿಷ್ಟ ಜಾತಿ<br>ಸಾಮಾನ್ಯ ಅರ್ಹತೆ ಅಭ್ಯರ್ಥಿ-2 ಹೆಚ್ಚುವರಿ ಪಟ್ಟಿ |

| 1 | 2 | 3 | 4 | 5 | 6 | 7 |
|---|---|---|---|---|---|---|
| 3 | ಪಿ.ಸುಮತಿ D/o ಸಿ. ಪುಟ್ಟರಾಜು ವೈದ್ಯನಾಥೇಶ್ವರ ನಿಲಯ, ತೋಟಗಾರಿಕೆ ಇಲಾಖೆ ಹಿಂಭಾಗ, ಬಿ.ಎಂ. ರಸ್ತೆ, ರಾಮನಗರ-571511 | 01-06-1971 | 31-03-20 | (i) S.S.L.C: 46.833<br>(ii) ಕನ್ನಡ ಬೆರಳಚ್ಚು ಸೀನಿಯರ್ : 77.000<br>ಒಟ್ಟು : 123.833 | 61.916 | ಪರಿಶಿಷ್ಟ ಜಾತಿ<br>ಮಹಿಳಾ ಅಭ್ಯರ್ಥಿ-1 ಹೆಚ್ಚುವರಿ ಪಟ್ಟಿ |
| 4 | ಜಕ್ಕವ್ವಾ ಯಮನಪ್ಪ ಕಟ್ಟಿಮನಿ D/oಯಮನಪ್ಪ ಕಟ್ಟೀಮನಿ ಚಂದಾಬವಡಿ ಕ್ರಾಸ್ ರೋಡ್, ಸಮಗಾರ ಓಣಿ, ವಿಜಾಪುರ-586101 | 01-06-1969 | 33-03-20 | (i) S.S.L.C: 45.500<br>(ii) ಕನ್ನಡ ಬೆರಳಚ್ಚು ಸೀನಿಯರ್ : 78.000<br>ಒಟ್ಟು : 123.500 | 61.750 | ಪರಿಶಿಷ್ಟ ಜಾತಿ<br>ಮಹಿಳಾ ಅಭ್ಯರ್ಥಿ-2 ಹೆಚ್ಚುವರಿ ಪಟ್ಟಿ |
| 5 | ಹುಲ್ಲಪ್ಪ ಹಿಂದಿನಮನಿ S/o. ಮಳಿಯಪ್ಪ ಮುಃಪೋಃ ಗುಡೂರ ತಾಃ ಹುನಗುಂದ ಬಾಗಲಕೋಟೆ-587202 | 20-07-1969 | 33-02-01 | (i) S.S.L.C: 41.000<br>(ii) ಕನ್ನಡ ಬೆರಳಚ್ಚು ಸೀನಿಯರ್ : 82.500<br>ಒಟ್ಟು : 123.500 | 61.750 | ಪರಿಶಿಷ್ಟ ಜಾತಿ<br>ಗ್ರಾಮೀಣ ಅಭ್ಯರ್ಥಿ-1 ಹೆಚ್ಚುವರಿ ಪಟ್ಟಿ |
| 6 | ಶಿದ್ದಾರೂಢ S/o. ಭೀಮಪ್ಪ ದೇವರಮನಿ ಪೋಃಮುಃ ಕಂಭಾವಿ, ತಾಃ ಸುರಪುರ, ಜಿಃ ಗುಲ್ಬರ್ಗಾ-585216 | 17-04-1971 | 31-05-04 | (i) S.S.L.C: 37.000<br>(ii) ಕನ್ನಡ ಬೆರಳಚ್ಚು ಸೀನಿಯರ್ : 84.500<br>ಒಟ್ಟು : 121.500 | 60.750 | ಪರಿಶಿಷ್ಟ ಜಾತಿ<br>ಗ್ರಾಮಿಣ ಅಭ್ಯರ್ಥಿ-2 ಹೆಚ್ಚುವರಿ ಪಟ್ಟಿ |
| **ಬ್ಯಾಕ್‌ಲಾಗ್ ಬೆರಳಚ್ಚುಗಾರರ ಮುಖ್ಯಪಟ್ಟಿ (Main list) ಪರಿಶಿಷ್ಟ ಪಂಗಡ (S.T.)** | | | | | | |
| 1 | ಲಲಿತಮ್ಮ ಎಸ್.ಆರ್. W/o. R.L. ಗಂಗಯ್ಯ, ಬಾಲಾಜಿನಗರ, ಶಿರಾ ಟೌನ್, ಜಿಃ ತುಮಕೂರು-572137. | 25-07-1971 | 31-01-26 | (i) S.S.L.C: 44.000<br>(ii) ಕನ್ನಡ ಬೆರಳಚ್ಚು ಸೀನಿಯರ್ : 81.500<br>ಒಟ್ಟು : 125.500 | 62.750 | ಪರಿಶಿಷ್ಟ ಪಂಗಡ<br>ಮಹಿಳಾ ಅಭ್ಯರ್ಥಿ-1 ಮುಖ್ಯಪಟ್ಟಿ |
| **ಬ್ಯಾಕ್‌ಲಾಗ್ ಬೆರಳಚ್ಚುಗಾರರ ಹೆಚ್ಚುವರಿ ಪಟ್ಟಿ (Additional list) ಪರಿಶಿಷ್ಟ ಪಂಗಡ (S.T.)** | | | | | | |
| 1 | ಕೆ.ಎಸ್. ಸುನೀತ D/o.K.S. ಸಂಜೀವ ರಾಯ ತೊಂಡೇಭಾವಿ, ರೈಲ್ವೆ ನಿಲ್ದಾಣ, ತಾಃ ಗೌರಿಬಿದನೂರು, ಜಿಃಕೋಲಾರ-561213 | 08-05-1973 | 29-04-13 | (i) S.S.L.C: 44.333<br>(ii) ಕನ್ನಡ ಬೆರಳಚ್ಚು ಸೀನಿಯರ್ : 68.500<br>ಒಟ್ಟು : 112.833 | 56.416 | ಪರಿಶಿಷ್ಟ ಪಂಗಡ<br>ಮಹಿಳಾ ಅಭ್ಯರ್ಥಿ-1 ಹೆಚ್ಚುವರಿ ಪಟ್ಟಿ |

**ಈ ಪಟ್ಟಿಯಲ್ಲಿರುವ ಅಭ್ಯರ್ಥಿಗಳ ಆಯ್ಕೆಯು ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.**
**ಷರತ್ತುಗಳು:**

1) ಮಹಿಳಾ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಮೇಲ್ಕಂಡ ಮಹಿಳಾ ಅಭ್ಯರ್ಥಿಗಳು ಗೌರವಾನ್ವಿತ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ (ಸಿವಿಲ್) ಸಂಖ್ಯೆ 232/99 (ಶ್ರೀ ಬಿ.ಎಲ್ ನಾರಾಯಣ - VS - ಕರ್ನಾಟಕ ರಾಜ್ಯ ಮತ್ತು ಇತರರು) ಇದರಲ್ಲಿ ಆಗುವ ಅಂತಿಮ ತೀರ್ಪಿಗೆ ಬದ್ಧರಾಗಿರತಕ್ಕದ್ದು ಹಾಗೂ ಆಯ್ಕೆ ಪಟ್ಟಿಯಲ್ಲಿರುವ ಮೇಲ್ಕಂಡ ಮಹಿಳಾ ಅಭ್ಯರ್ಥಿಗಳು ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ತಿಳಿಯತಕ್ಕದ್ದು.
2) ಆಯ್ಕೆಯಾದ ಅಭ್ಯರ್ಥಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಲ್ಲವೆಂದು ಸತ್ಯಾಪನೆಯಿಂದ ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
3) ಅಭ್ಯರ್ಥಿಗಳು ಸಲ್ಲಿಸಿರುವ ಅಂಕಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸಕ್ಷಮ ಪ್ರಾಧಿಕಾರದಿಂದ ಸತ್ಯಾಪನೆಗೆ ಒಳಪಡುತ್ತವೆ.
4) ಒಂದು ವೇಳೆ ಅಭ್ಯರ್ಥಿಯು ಸಲ್ಲಿಸಿರುವ ಅಂಕ ಪಟ್ಟಿಗಳು ಮತ್ತು ಮೀಸಲಾತಿ ಪ್ರಮಾಣ ಪತ್ರಗಳು ಹಾಗೂ ಜಾತಿ ಪ್ರಮಾಣ ಪತ್ರಗಳು ಸುಳ್ಳು ಅಥವಾ ನಕಲಿ ಎಂದು ದೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ರದ್ದು ಪಡಿಸಲಾಗುವುದು. ಹಾಗೂ ಅಂತಹ ಅಭ್ಯರ್ಥಿಗಳ ವಿರುದ್ಧ ಭಾರತೀಯ ದಂಡ ಸಂಹಿತೆಯಲ್ಲಿನ ಸೂಕ್ತ ಕಲಂಗಳ ಅಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು ಹಾಗೂ KCS (CCA) ನಿಯಮಗಳು 1957 ರ ಅಡಿಯಲ್ಲಿ ಶಿಸ್ತು ಕ್ರಮ ಕೈಗೊಳ್ಳಲಾಗುವುದು.
5) ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡ ಅಭ್ಯರ್ಥಿಗಳು ಗ್ರಾಮೀಣ ಅಭ್ಯರ್ಥಿಗಳಲ್ಲವೆಂದು ಧೃಢಪಟ್ಟಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಶಾಶ್ವತವಾಗಿ ಯಾವುದೇ ಸೂಚನೆ ಇಲ್ಲದೇ ರದ್ದುಪಡಿಸಲಾಗುವುದು.
6) ಒಂದು ವೇಳೆ ಯಾವುದೇ ಕಾರಣದಿಂದಾಗಿ ಈ ಪಟ್ಟಿ ಮೂಲಕ ಆಯ್ಕೆಯಾದ ಅಭ್ಯರ್ಥಿಗಳ ಆಯ್ಕೆಯು ರದ್ದಾದ ಪಕ್ಷದಲ್ಲಿ ಅಂತಹವರ ಬದಲಿಗೆ ಅರ್ಹತೆ ಮತ್ತು ಮೀಸಲಾತಿ ಆಧಾರದ ಮೇಲೆ ಬೇರೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.
7) ಆಯ್ಕೆಯಾದ ಅಭ್ಯರ್ಥಿಗಳು ಈ ಆಯ್ಕೆ ಪಟ್ಟಿಯಲ್ಲಿ ಆಯಾಯ ಜಿಲ್ಲೆಗಳಲ್ಲಿ ಗುರುತಿಸಲ್ಪಟ್ಟಿರುವ ಬ್ಯಾಕ್‌ಲಾಗ್ ಹುದ್ದೆಗಳಿರುವ ಯಾವುದೇ ಜಿಲ್ಲೆಯಲ್ಲಾದರೂ ಕೆಲಸ ಮಾಡಲು ಸಿದ್ಧರಾಗಿರಬೇಕು.
8) ಈ ಆಯ್ಕೆ ಪಟ್ಟಿಯು ಯಾವುದೇ ಸಂದರ್ಭದಲ್ಲಾದರೂ ತಿದ್ದೋಲೆ ಮತ್ತು ಮಾರ್ಪಾಡಿಗೆ ಒಳಪಟ್ಟಿರುತ್ತದೆ.
9) ಹೆಚ್ಚುವರಿ ಪಟ್ಟಿಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ವಿಷಯದಲ್ಲಿ ಬೆರಳಚ್ಚುಗಾರರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲಾ ಅಥವಾ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲಾ.
10) ಹೆಚ್ಚುವರಿ ಪಟ್ಟಿಯಲ್ಲಿರುವವರಿಗೆ, ಒಂದು ವೇಳೆ ಮುಖ್ಯ ಪಟ್ಟಿಯಲ್ಲಿರುವವರು ಸರ್ಕಾರಿ ಸೇವೆಗೆ ಹಾಜರಾಗದೇ ಇದ್ದಲ್ಲಿ ಮಾತ್ರ, ಹೆಚ್ಚುವರಿ ಪಟ್ಟಿಯಲ್ಲಿರುವವರನ್ನು ಮೀಸಲಾತಿಗೆ ಅನುಗುಣವಾಗಿ ಅರ್ಹತೆ ಆಧಾರದ ಮೇಲೆ ನೇಮಕಾತಿಗಾಗಿ ಪರಿಶೀಲಿಸಲಾಗುವುದು.
11) ಮುಖ್ಯ ಪಟ್ಟಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳಿಗೆ, ಈ ಆಯ್ಕೆ ಪಟ್ಟಿಯಲ್ಲಿ ಆಯಾಯ ಜಿಲ್ಲೆಗಳಲ್ಲಿ ಗುರುತಿಸಲ್ಪಟ್ಟಿರುವ ಖಾಲಿ ಇರುವ ಬ್ಯಾಕ್‌ಲಾಗ್ ಹುದ್ದೆಗಳ ಅನುಸಾರ, ನೇಮಕಾತಿ ಆದೇಶ ನೀಡಲಾಗುವುದು.
12) ಯಾವುದೇ ಕಾರಣಕ್ಕಾಗಿ ಈ ಅಂತಿಮ ಆಯ್ಕೆ ಪಟ್ಟಿಯು ಪರಿಷ್ಕರಿಸಲ್ಪಟ್ಟಲ್ಲಿ ಅಥವಾ ಬದಲಾವಣೆಯಾದಲ್ಲಿ ಸದರಿ ಪರಿಷ್ಕರಣೆಗೆ ಅನುಗುಣವಾಗಿ ಅಥವಾ ಬದಲಾವಣೆಗೆ ಅನುಗುಣವಾಗಿ ಯಾವುದೇ ಕಾರಣ ನೀಡದೇ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳ ಆಯ್ಕೆಯನ್ನು ಮುಕ್ತಾಯಗೊಳಿಸಲಾಗುವುದು ಅಥವಾ ಪರಿಷ್ಕರಿಸಲಾಗುವುದು.
13) ಈ ಇಲಾಖೆಯ ಬೆರಳಚ್ಚುಗಾರರ ಬ್ಯಾಕ್‌ಲಾಗ್ ಹುದ್ದೆಯಲ್ಲಿನ ನೇಮಕಾತಿಗಾಗಿ ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ ಸಲ್ಲಿಸಿದ ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಮತ್ತು ಕನ್ನಡ ಟೈಪಿಂಗ್ ಸೀನಿಯರ್ ಅಂಕಪಟ್ಟಿ ಮತ್ತು ಜಾತಿ ಪ್ರಮಾಣ ಪತ್ರ ಹಾಗೂ ಮೀಸಲಾತಿ ವರ್ಗೀಕರಣ ಕುರಿತು ಸಲ್ಲಿಸಿದ ಆಯಾಯ ಮೀಸಲಾತಿ ಪ್ರಮಾಣ ಪತ್ರದ ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಅಭ್ಯರ್ಥಿಗಳನ್ನು ಆಯಾಯ Category ಯಲ್ಲಿ ಆಯ್ಕೆ ಮಾಡಲಾಗಿದೆ.

ಒಂದು ವೇಳೆ ಈ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳ ಪೈಕಿ ಬೇರೆ ಇನ್ಯಾವುದೇ ಅಭ್ಯರ್ಥಿಯು ಅವರ ಆಯ್ಕೆ ಬಗ್ಗೆ ದಾಖಲೆಗಳ ಸಹಿತ ಸಕಾರಣಗಳೊಂದಿಗೆ ಅವರ ಆಯ್ಕೆಯ Claim ಅನ್ನು ಸ್ಥಾಪಿಸಿದಲ್ಲಿ(establish ಮಾಡಿದಲ್ಲಿ) ಅಥವಾ ಈ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಗಳ ಆಯ್ಕೆಯನ್ನು ಅಸಿಂಧುವೆಂದು ದಾಖಲೆಗಳ ಸಹಿತ ಸಾಬೀತು ಪಡಿಸಿದಲ್ಲಿ ಅಂತಹ ಅಭ್ಯರ್ಥಿಗಳ ಆಯ್ಕೆಯನ್ನು ಯಾವುದೇ ಕಾರಣ ನೀಡದೇ ಅಥವಾ ಯಾವುದೇ ನೋಟೀಸ್ ನೀಡದೇ ಶಾಶ್ವತವಾಗಿ ರದ್ದುಗೊಳಿಸಲಾಗುವುದು ಹಾಗೂ ಅಂತಹ ಅಭ್ಯರ್ಥಿಗಳ ಬದಲಿಗೆ ಈ ಹುದ್ದೆಯ ನೇಮಕಾತಿಗಾಗಿ ಅರ್ಜಿ ಸಲ್ಲಿಸಿರುವ ಬೇರೊಬ್ಬ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗುವುದು. ಇದಕ್ಕೆ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು.

14) ಹೆಚ್ಚುವರಿ ಪಟ್ಟಿಯಲ್ಲಿರುವ (1) ಕೆ. ಬಾಬು (SC) (2) ಪಿ. ಸುಮತಿ (SC) (3) ಜಕ್ಕವ್ವ ಕಟ್ಟೀಮನಿ (SC) (4) ಸಿದ್ದಾರೂಡ (SC) ಮತ್ತು (5) ಕೆ.ಎಸ್. ಸುನೀತಾ (ST) ಇವರುಗಳ ಪೂರ್ವ ಚರಿತ್ರಾ ವರದಿಗಳು ಪೋಲೀಸ್ ಇಲಾಖೆಯಿಂದ ಬರುವುದನ್ನು ಕಾಯ್ದಿರಿಸಿ ಹಾಗೂ ಇವರುಗಳು ತಮ್ಮ ಜಾತಿ ಸಿಂಧುತ್ವ ಪ್ರಮಾಣ ಪತ್ರಗಳನ್ನು ಹಾಜರ್‌ಪಡಿಸುವ ಷರತ್ತಿಗೆ ಒಳಪಡಿಸಿ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆ ಮಾಡಿದೆ.
15) ಉಲ್ಲೇಖ (1) ರನ್ವಯ ಪ್ರಕಟಿಸಿರುವ KCS (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್) (ವಿಶೇಷ ನೇಮಕಾತಿ) ನಿಯಮಗಳು 2001 ರಲ್ಲಿನ ನಿಯಮ 6 ರ ಪ್ರಕಾರ ಪ್ರಕಟಿಸಿರುವ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿ ಅಭ್ಯರ್ಥಿಗಳ ಹೆಸರನ್ನು ಸೇರಿಸಲಾಗಿದೆ ಎಂಬ ಕಾರಣಕ್ಕಾಗಿಯೇ ಈ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಯಾವುದೇ ಅಭ್ಯರ್ಥಿಗಳು ಸದರಿ ನಿಯಮಗಳ ನಿಯಮ 7(2) ರಲ್ಲಿರುವ ಷರತ್ತಿನಂತೆ ಬೆರಳಚ್ಚುಗಾರರ ಹುದ್ದೆಯ ಮೇಲೆ ತಮ್ಮ ನೇಮಕಾತಿಯ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ನೇಮಕಾತಿಯ ಹಕ್ಕನ್ನು ಸಾಧಿಸತಕ್ಕದ್ದಲ್ಲ.

**ಸಿ. ಕೃಷ್ಣಪ್ಪ**
ಆಯ್ಕೆ ಪ್ರಾಧಿಕಾರಿ ಹಾಗೂ ನೋಂದಣಿ
ಮಹಾ ಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

ಪಿ.ಆರ್.644